# ತೆಕ್ಕಲಕೋಟೆಯ ಮಲ್ಲಯ್ಯ : ಇತಿಹಾಸ ಮತ್ತು ಪುರಾತತ್ವ ಅಧ್ಯಯನ

(೨೦೧೭-೧೮ನೇ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಬಂಧ)

ಸಂಶೋಧನಾ ವಿದ್ಯಾರ್ಥಿ

**ನಿರ್ಮಲ ಸಿ.ವಿ.**

ನೊಂದಣಿ ಸಂಖೆ : ೧೭೦೧೦೮೦೩೦೦೦೮



ಮಾರ್ಗದರ್ಶಕರು

ಡಾ. ವಾಸುದೇವ ಬಡಿಗೇರ

ಪ್ರಾಧ್ಯಾಪಕರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ ಹಂಪಿ

ವಿದ್ಯಾರಣ್ಯ - ೫೮೩ ೨೭೬



ಸಮಾಜ ವಿಜ್ಞಾನಗಳ ನಿಕಾಯ

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೧೭-೧೮

# ತೆಕ್ಕಲಕೋಟೆಯ ಮಲ್ಲಯ್ಯ : ಇತಿಹಾಸ ಮತ್ತು ಪುರಾತತ್ವ ಅಧ್ಯಯನ

(೨೦೧೭-೧೮ನೇ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಬಂಧ)

**ಸಂಶೋಧನಾ ವಿದ್ಯಾರ್ಥಿ**

ನಿರ್ಮಲ ಸಿ.ವಿ

ನೋಂದಣಿ ಸಂಖ್ಯೆ : ೧೭೦೧೦೮೦೩೦೦೦೮



**ಮಾರ್ಗದರ್ಶಕರು**

ಡಾ. ವಾಸುದೇವ ಬಡಿಗೇರ

ಪ್ರಾಧ್ಯಾಪಕರು

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ ಹಂಪಿ

ವಿದ್ಯಾರಣ್ಯ – ೫೮೩ ೨೭೬



**ಸಮಾಜ ವಿಜ್ಞಾನಗಳ ನಿಕಾಯ**

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩ ೩೭೬

೨೦೧೭ – ೧೮

## ಮಾರ್ಗದರ್ಶಕರ ದೃಢೀಕರಣ ಪತ್ರ

ನಿರ್ಮಲ ಸಿ.ವಿ. ಅವರು **ತೆಕ್ಕಲಕೋಟೆಯ ಮಲ್ಲಯ್ಯ : ಇತಿಹಾಸ ಮತ್ತು ಪುರಾತತ್ವ ಅಧ್ಯಯನ** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಡಿಯಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಈ ಸಂಪ್ರಬಂಧವನ್ನು ಸಲ್ಲಿಸಿರುತ್ತಾರೆ. ಪ್ರಸ್ತುತ ಈ ಅಧ್ಯಯನದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

ಸ್ಥಳ : ವಿದ್ಯಾರಣ್ಯ
ದಿನಾಂಕ :

(ಡಾ. ವಾಸುದೇವ ಬಡಿಗೇರ)
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

## ಸಂಶೋಧಕರ ಪ್ರಮಾಣ ಪತ್ರ

**ತೆಕ್ಕಲಕೋಟೆಯ ಮಲ್ಲಯ್ಯ : ಇತಿಹಾಸ ಮತ್ತು ಪುರಾತತ್ವ ಅಧ್ಯಯನ** ಎಂಬ ಶೀರ್ಷಿಕೆಯ ಈ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗದ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರಾದ **ಡಾ. ವಾಸುದೇವ ಬಡಿಗೇರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಈ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಅಧ್ಯಯನದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ :

(ನಿರ್ಮಲ ಸಿ.ವಿ.)
ಸಂಶೋಧನಾ ವಿದ್ಯಾರ್ಥಿ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ತೆಕ್ಕಲಕೋಟೆಯ ಮಲ್ಲಯ್ಯ : ಇತಿಹಾಸ ಮತ್ತು ಪುರಾತತ್ವ ಅಧ್ಯಯನ

## ಪರಿವಿಡಿ

# ಅಧ್ಯಾಯ ೧

## ಪ್ರಸ್ತಾವನೆ

ಭಾರತದ ಚರಿತ್ರೆಯಲ್ಲಿ ಕರ್ನಾಟಕದ ಸ್ಥಾನ ವಿಶಿಷ್ಟವೂ ಮತ್ತು ಮಹತ್ವದ್ದಾಗಿದೆ. ಕರ್ನಾಟಕವು ರಾಜಕೀಯವಾಗಿ, ಸಾಮಾಜಿಕವಾಗಿ, ಭೌಗೋಳಿಕವಾಗಿ. ದೇಶದ ಇತರೆ ರಾಜ್ಯಗಳಿಗಿಂತಲೂ ಭಿನ್ನವಾಗಿದೆ. ಅಲ್ಲದೆ ವಿಭಿನ್ನ ಸಂಸ್ಕೃತಿಗಳನ್ನು ಹೊಂದಿರುವ ಪ್ರದೇಶವಾಗಿದೆ. ಅನೇಕ ಸಾಂಸ್ಕೃತಿಕ ನಾಯಕರ ಪರಂಪರೆಯನ್ನು ಇಲ್ಲಿ ಕಾಣಬಹುದು. ಹಾಗೆಯೇ ಜನಸಾಮಾನ್ಯರ ಆರಾಧ್ಯ ದೈವವಾಗಿ ಗುರುತಿಸಿಕೊಂಡಿರುವ ಧಾರ್ಮಿಕ ಪರಂಪರೆಗಳಲ್ಲಿ ಮೈಲಾರ ಪರಂಪರೆಯೂ ಒಂದು. ಈ ಪರಂಪರೆಯೂ ಚಾರಿತ್ರಿಕವಾಗಿ ಅನೇಕ ಸಂಗತಿಗಳನ್ನು ಮೈಗೂಡಿಸಿಕೊಂಡಿರುವುದನ್ನು ಗಮನಿಸಬಹುದಾಗಿದೆ.

ಮಂಟೇಸ್ವಾಮಿ, ಮಲೆಮಹದೇಶ್ವರ ಪರಂಪರೆಗಳು ಹೇಗೆ ತಮ್ಮ ಸಂಸ್ಕೃತಿಯನ್ನು ವ್ಯಾಪಕವಾಗಿ ಬಿಂಬಿಸಿವೆಯೋ ಹಾಗೆಯೇ ಮೈಲಾರ ಪರಂಪರೆಯೂ ಕೂಡ ಒಂದಾಗಿದ್ದು ತನ್ನ ಸಂಸ್ಕೃತಿಯನ್ನು ವ್ಯಾಪಕವಾಗಿ ಬಿಂಬಿಸಿದೆ. ಈ ಪರಂಪರೆಯು ಮಹಾರಾಷ್ಟ್ರ, ಆಂಧ್ರಪ್ರದೇಶ, ಮತ್ತು ತಮಿಳುನಾಡಿನಲ್ಲಿಯೂ ಜನಸಾಮಾನ್ಯರ ಆರಾಧ್ಯ ದೈವವಾಗಿದೆ. ಜನಪದ ದೈವವಾದ ಈ ದೇವರು ಮಹಾರಾಷ್ಟ್ರದಲ್ಲಿ ಖಂಡೋಬನೆಂದು, ಕರ್ನಾಟಕದಲ್ಲಿ ಮೈಲಾರನೆಂದು ಗುರುತಿಕೊಂಡಿದೆ. ಶ್ರೀಶೈಲದಿಂದ ಆರಂಭವಾದ ಕಾಳಭೈರವ ಅಥವಾ ಮೈಲಾರನ ಪರಂಪರೆ ಹಾಗೂ ಆಚರಣೆಗಳು ತುಂಗಭದ್ರಾ ನದಿಯುದ್ದಕ್ಕೂ ಕಾಣಿಸುತ್ತವೆ. ಇವುಗಳಲ್ಲಿ ಹೂವಿನ ಹಡಗಲಿ ತಾಲ್ಲೂಕಿನ ಹಿರೇ ಮೈಲಾರ. ರಾಣೀಬೆನ್ನೂರು ತಾಲ್ಲೂಕಿನ ದೇವರಗುಡ್ಡ, ಯಾದಗಿರಿ ತಾಲ್ಲೂಕಿನ ಮೈಲಾರ, ಹೊಸಪೇಟೆ ತಾಲ್ಲೂಕಿನ ಕಂಪ್ಲಿ, ಹಂಪಿ ಇತ್ಯಾದಿ ಪ್ರಮುಖವಾದಂತವು. ಈ ಒಟ್ಟು ಕ್ಷೇತ್ರಗಳಲ್ಲಿ ಇಂದಿಗೂ ಸಾಂಸ್ಕೃತಿಕ ಚಟುವಟಿಕೆಗಳು ಜೀವಂತಿಕೆ ಪಡೆದುಕೊಂಡಿವೆ. ಇವುಗಳಲ್ಲಿ ಹಿರೇ ಮೈಲಾರ ಮೈಲಾರಲಿಂಗನ ಮೂಲಸ್ಥಳವೆಂದು ಜನರ ನಂಬಿಕೆಯಾಗಿದೆ. ಇದಕ್ಕೆ ಪುಷ್ಟಿ ನೀಡುವಂತೆ ಮೌಖಿಕ ಸಾಹಿತ್ಯ ಮತ್ತು ಪುರಾಣಗಳು ಬೆಳೆದುಬಂದಿವೆ. ಹಿರೇ ಮೈಲಾರ, ದೇವರಗುಡ್ಡ, ಯಾದಗಿರಿ ಮೈಲಾರಲಿಂಗನ ಆರಾಧನೆ ನಿತ್ಯ ನಡೆಯುತ್ತದೆ. ವರ್ಷಕ್ಕೊಮ್ಮೆ ಜಾತ್ರೆ ವಿಜೃಂಭಣೆಯಿಂದ ನಡೆಯುತ್ತದೆ. ಮೈಲಾರನ ಪವಾಡಗಳನ್ನು ಕುರಿತಂತೆ ಅನೇಕ ಕಾವ್ಯಗಳು ಹುಟ್ಟಿಕೊಂಡಿವೆ.

ಈ ಮೇಲಿನ ದೈವಗಳಷ್ಟೇ ಪ್ರತಿಷ್ಠೆ, ಮಹತ್ವ, ಮತ್ತು ಆಚರಣೆಗಳನ್ನು ಹೊಂದಿದಂತಹ ಮತ್ತೊಂದು ದೇವಾಲಯವು ಬಳ್ಳಾರಿ ಜಿಲ್ಲೆಯ ಸಿರಗುಪ್ಪ ತಾಲ್ಲೂಕಿನ ತೆಕ್ಕಲಕೋಟೆಯ ಹತ್ತಿರದ ಮಲ್ಲಯ್ಯನ ಗುಡ್ಡವು ಒಂದಾಗಿದೆ. ಈ ದೇವಾಲಯವೂ ಸಹ ಪ್ರಾಚೀನವು, ವೈಶಿಷ್ಟ್ಯ ಪೂರ್ಣವು ಹಾಗೂ ಕರ್ನಾಟಕದಲ್ಲಿ ಇತರ ಕ್ಷೇತ್ರಗಳಿಗಿಂತ ಪ್ರಾಚೀನವಾದ ದೇವಾಲಯವಾಗಿದೆ. ಮೈಲಾರ ದೇವರು ಸಾಮಾಜಿಕವಾಗಿ ಎಲ್ಲಾ ಸಮುದಾಯದಲ್ಲಿ ಮನ್ನಣೆಯನ್ನು ಹೇಗೆ ಪಡೆಯಿತು. ಈ ದೇವರ ಹಿನ್ನೆಲೆ. ನಂಬಿಕೆಗಳು, ಆಚರಣೆಗಳು, ಕಾವ್ಯಗಳು, ಪವಾಡಗಳು, ಮುಂತಾದ ಅಂಶಗಳು ಗಮನ ಸೆಳೆಯುತ್ತವೆ. ಈ ಅಂಶಗಳ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಅಭ್ಯಸಿಸುವ ಪ್ರಯತ್ನ ಮಾಡಲಾಗಿದೆ.

ತೆಕ್ಕಲಕೋಟೆಯು ಚಾರಿತ್ರಿಕವಾಗಿ ಸಂಪತ್ಭರಿತವಾದ ನೆಲೆಯಾಗಿದೆ. ಮೈಲಾರ ದೇವಾಲಯವು ಈ ಗ್ರಾಮದ ಪೂರ್ವಕ್ಕೆ ೨ ಕಿ.ಮೀ. ದೂರದಲ್ಲಿದ್ದು, ಗುಡ್ಡದ ಮೇಲೆ ವಿಶಾಲವಾದ ಪ್ರಾಂಗಣದಲ್ಲಿ ಶಿವ-ಪಾರ್ವತಿ ಮತ್ತು ಮೈಲಾರಲಿಂಗನ ದೇವಾಲಯಗಳಿವೆ. ಇಲ್ಲಿಯ ಮಲ್ಲಯ್ಯ ವಿಶಿಷ್ಟ ಪರಂಪರೆಯನ್ನು ಹೊಂದಿದೆ. ಗರ್ಭಗೃಹ, ಸಭಾಮಂಟಪ ಹಾಗೂ ಮಹಾಮಂಟಪಗಳಿಂದ ಕೂಡಿದ ಈ ದೇವಾಲಯವು ಕಲ್ಯಾಣ ಚಾಲುಕ್ಯರಿಂದ ವಿಜಯನಗರ ಮತ್ತು ನಂತರದ ಪಾಳೆಯಗಾರರಿಂದ ಅನೇಕ ದಾನ-ದತ್ತಿಗಳನ್ನು ಪಡೆಯುವ ಮೂಲಕ ಜೀರ್ಣೋದ್ಧಾರವಾಗುತ್ತಾ ಮತ್ತು ವಿಸ್ತರಿಸುತ್ತಾ ಬಂದಿದೆ. ಮೈಲಾರಲಿಂಗ, ಗಂಗಿಮಾಳಮ್ಮ ಮತ್ತು ತುಪ್ಪದ ಮಾಳಮ್ಮನಿಗೆ ಸಂಬಂಧಿಸಿದ ವಿವಿಧ ನಂಬಿಕೆ ಸಂಪ್ರದಾಯಗಳು ಇಲ್ಲಿವೆ. ಕನ್ನಡಿಗರು ಮತ್ತು ತೆಲುಗರು ಕೂಡಿಕೊಂಡು ಪ್ರತಿವರ್ಷ ನಡೆಸುವ ಜಾತ್ರೆ ಮತ್ತು ಆಚರಣೆಗಳು ಇಂದಿಗೂ ಮುಂದುವರೆದುಕೊಂಡು ಬಂದಿವೆ. ಮೈಲಾರ ದೇವರಿಗೆ ಸಂಬಂಧಿಸಿದಂತೆ ಆಕರಗಳು ತುಂಬಾ ದೊರೆಯುತ್ತವೆ. ಅವುಗಳೆಂದರೆ ಶಾಸನಗಳು, ಮೂರ್ತಿಶಿಲ್ಪಗಳು, ಐತಿಹ್ಯಗಳು, ಕಾವ್ಯಗಳು, ನಂಬಿಕೆ ಆಚರಣೆಗಳು ಮುಂತಾದವುಗಳು ಇಲ್ಲಿನ ಸಾಂಸ್ಕೃತಿಕ ವೈಶಿಷ್ಟ್ಯತೆಗೆ ಸಾಕ್ಷಿಯಾಗಿ ನಿಂತಿವೆ.

**ಇಲ್ಲಿಯವರೆಗೆ ನಡೆದ ಸಮೀಕ್ಷೆಗಳು**

ಮೈಲಾರ ಪರಂಪರೆಗೆ ಸಂಬಂಧಿಸಿದಂತೆ ಕೃತಿಗಳು, ಲೇಖನಗಳು, ಮಹಾಪ್ರಬಂಧಗಳು, ಶಾಸನ ಸಂಪುಟಗಳು ಅಧ್ಯಯನ ವಿಷಯಕ್ಕೆ ಸೂಕ್ತವಾದ ಆಕರಗಳಾಗಿವೆ. ಅವುಗಳಲ್ಲಿ ಕೆಲವು ಪ್ರಮುಖ ಅಧ್ಯಯನ ಸಮೀಕ್ಷೆ ಈ ಕೆಳಗಿನಂತಿವೆ.

ನೇಗಿನಹಾಳ್ ಅವರ ಮೈಲಾರಲಿಂಗ - ಖಂಡೋಬಾ ೧೯೯೨ ಕೃತಿಯಲ್ಲಿ ಮೈಲಾರನ ಬಗೆಗಿನ ಆಚರಣೆಗಳು, ಪುರಾಣಗಳು, ಸಂಕೇತಗಳು, ಮೈಲಾರ ಮತ್ತು ಇತರ ದೇವತೆಗಳ ಸಂಬಂಧಗಳ ಬಗೆಗೆ ವಿಶ್ಲೇಷಿಸಿದ್ದಾರೆ. ಡಾ. ಮಹದೇವ ಸಿ (ಸಂ) ಮೈಲಾರ ೨೦೧೨ ಕೃತಿಯು ಮೈಲಾರ ಬಗೆಗಿನ ಶಾಸನಗಳು, ಜಾತ್ರೆ, ವಾಸ್ತುಶಿಲ್ಪ, ಮೂರ್ತಿಶಿಲ್ಪಗಳ ಬಗ್ಗೆ ಚರ್ಚಿಸಲಾಗಿದೆ. ಸೋಮಶೇಖರ ಇಮ್ರಾಪುರ (ಸಂ) ಜಾನಪದ ಸಾಹಿತ್ಯ ದರ್ಶನ ಭಾಗ- ೧೩, ೧೯೯೪ ಮೈಲಾರ ಜಾತ್ರೆ, ಪೂಜೆ, ಹರಿಕೆ, ನಂಬಿಕೆ ಪೂಜಾರಿ ಭಕ್ತರಿಗೆ ಸಂಬಂಧಿಸಿದಂತೆ ವಿಶ್ಲೇಷಿಸಲಾಗಿದೆ. ಮಂಜುನಾಥ ಬೆವಿನಕಟ್ಟಿ ಅವರ ಮೈಲಾರಲಿಂಗ ಕಾವ್ಯಗಳು ೧೯೯೯ ಕೃತಿಯು ವಿವಿಧ ಭಾಗದ ಮೈಲಾರನ ಕಾವ್ಯಗಳನ್ನು ಒಳಗೊಂಡಿದೆ. ಶ್ರೀನಿವಾಸ ರಿತ್ತಿ ಮೈಲಾರ ದೇವರು ೧೯೭೦ ಕೃತಿಯು ಪೂರಕವಾಗಿದ್ದು ಮೈಲಾರನನ್ನು ಕುರಿತು ಚರ್ಚಿಸಲಾಗಿದೆ. ಡಾ. ವಾಸುದೇವ ಬಡಿಗೇರ ಅವರ ಲೇಖನ ಹಂಪಿಪರಿಸರದ ಮೈಲಾರ ಪರಂಪರೆ ಈ ಲೇಖನದಲ್ಲಿ ಹಂಪಿಪ್ರದೇಶದ ಮೈಲಾರದ ಬಗ್ಗೆ ವಿಶ್ಲೇಷಿಸಿದ್ದಾರೆ. ನೇಗಿನಹಾಳ್ ಪ್ರಬಂದಗಳು ಲೇಖನದಲ್ಲಿ ಪರಿವಾರದೇವತೆಗಳು ಶಾಸನಗಳಲ್ಲಿ ಮೈಲಾರ ಮಾಳಾಚಿಯ ಬಗ್ಗೆ ಚರ್ಚಿಸಲಾಗಿದೆ. ನಾಗರಾಜ ಹೊಸೂರಕರ್ ರವರ ಮೈಲಾರಲಿಂಗ ಆಚರಣೆ ಒಂದು ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ ಪಿ.ಎಚ್.ಡಿ. ಮಹಾಪ್ರಬಂಧ) ವೂ ಸಹ ಮೈಲಾರನ ಕಾವ್ಯಗಳು, ಐತಿಹ್ಯಗಳು, ಶಾಸನಗಳ ಇತಿಹಾಸವನ್ನು ಚರ್ಚಿಸಲಾಗಿದೆ. ಡಾ. ವಾಸುದೇವ ಬಡಿಗೇರ ಅವರ ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ ೨೦೧೨ ಕೃತಿಯಲ್ಲಿ ತೆಕ್ಕಲಕೋಟೆಯ ಮೈಲಾರನ ಕುರಿತು ಸಂಕ್ಷಿಪ್ತ ಮಾಹಿತಿ ನೀಡಿದ್ದಾರೆ.

ಡಾ. ಚೆನ್ನಬಸಪ್ಪ ಪಾಟೀಲ್ ಅವರ ಬಳ್ಳಾರಿ ಜಿಲ್ಲೆಯ ಶಾಸನಗಳು ಎನ್ನುವ ಕೃತಿಯಲ್ಲಿ ತೆಕ್ಕಲಕೋಟೆಯ ಶಾಸನಗಳ ಬಗ್ಗೆ ದಾಖಲಿಸಿದ್ದಾರೆ. ಡಾ. ಎಂ. ಕೊಟ್ರೇಶ್ ಅವರ ಬಳ್ಳಾರಿ ಜಿಲ್ಲೆಯ ಕೋಟೆಗಳು ಎನ್ನುವ ತಮ್ಮ ಪಿಎಚ್.ಡಿ. ಮಹಾಪ್ರಬಂಧದಲ್ಲಿ ಇಲ್ಲಿನ ಕೋಟೆಯ ಬಗ್ಗೆ ಮಾಹಿತಿ ನೀಡಿದ್ದಾರೆ.

ಡಾ. ಎಲ್. ಶ್ರೀನಿವಾಸ ಅವರ ಹಂಪಿ ಪರಿಸರದ ಆದಿಮಾನವನ ನೆಲೆಗಳು ಎನ್ನುವ ಕೃತಿಯಲ್ಲಿ ತೆಕ್ಕಲಕೋಟೆಯ ನವ ಶಿಲಾಯುಗದ ಸಂಸ್ಕೃತಿಯ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ. ಆದರೆ ತೆಕ್ಕಲಕೋಟೆಯ ಮೈಲಾರನ ಕುರಿತಂತೆ ಸಮಗ್ರವಾಗಿ ಅಧ್ಯಯನವಾಗಿಲ್ಲ ಆದ್ದರಿಂದ ವ್ಯವಸ್ಥಿತ ಅಧ್ಯಯನ ಮಾಡುವ ಹಿನ್ನೆಲೆಯಲ್ಲಿ ಈ ವಿಷಯವನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

**ಅಧ್ಯಯನದ ಉದ್ದೇಶ**

ಅಧ್ಯಯನದ ಉದ್ದೇಶವು ಸಂಶೋಧನ ಕೆಲಸಕ್ಕೆ ಮಾರ್ಗಸೂಚಿಯಂತೆ ಕೆಲಸಮಾಡುತ್ತದೆ. ಆದ್ದರಿಂದ ಸಂಶೋಧನ ಅಧ್ಯಯನಕ್ಕೆ ಉದ್ದೇಶವಿರಲೇಬೇಕು. ಕೆಲವೊಂದು ನಿರ್ದಿಷ್ಟ ಉದ್ದೇಶಗಳನ್ನು ಇಟ್ಟುಕೊಂಡು ಅಧ್ಯಯನ ಅಥವಾ ಸಂಶೋಧನೆಯನ್ನು ಕೈಗೊಂಡು ಕಾರ್ಯ ನಿರ್ವಹಿಸಿದಾಗ ಅದು ಪರಿಪೂರ್ಣವಾಗುತ್ತದೆ.

ಪ್ರಸ್ತುತ ಅಧ್ಯಯನವು ತೆಕ್ಕಲಕೋಟೆಯ ಮಲ್ಲಯ್ಯ : ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಎಂಬ ಶೀರ್ಷಿಕೆಯನ್ನು ಹೊಂದಿದ್ದು ಮೈಲಾರಲಿಂಗನಿಗೆ ಸಂಬಂಧಿಸಿದ ಆಚರಣೆಗಳನ್ನು ಕುರಿತು ಅಭ್ಯಾಸಿಸಿ ಅದರಲ್ಲಿನ ಸಾಂಸ್ಕೃತಿಕ ಅಂಶಗಳನ್ನು ಅರಿಯುವುದು ಮತ್ತು ಈ ದೇವರ ಹಿನ್ನೆಲೆ, ವೈಶಿಷ್ಟ್ಯತೆಯನ್ನು ತಿಳಿಯುವುದು ಅಧ್ಯಯನದ ಪ್ರಮುಖ ಉದ್ದೇಶವಾಗಿದೆ. ಶಾಸನಗಳ ಹಿನ್ನೆಲೆಯಲ್ಲಿ ಮೈಲಾರಲಿಂಗ ಪರಂಪರೆಯ ಪ್ರಾಚೀನತೆಯನ್ನು ತಿಳಿಯುವುದು. ತೆಕ್ಕಲಕೋಟೆಯು ಪ್ರಾಗೈತಿಕ ಇತಿಹಾಸದ ಹಿನ್ನೆಲೆಯನ್ನು ಹೊಂದಿದ್ದು ಈ ಪ್ರದೇಶವು ಆದಿಮಾನವನ ವಸತಿನೆಲೆಯ ವಿವಿಧ ಕಾಲಗಟ್ಟಗಳನ್ನು ವಿಶ್ಲೇಶಿಸುವುದು. ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿದ ಮನೆತನಗಳು ಮತ್ತು ಇವರು ನೀಡಿದ ಕೊಡುಗೆಗಳು, ದಾನ-ದತ್ತಿಗಳ ವಿಶೇಷತೆಗಳೇನು? ಎನ್ನುವ ಅಂಶಗಳನ್ನು ದಾಖಲಿಸುವುದು ಅಲ್ಲದೆ ಈ ಪ್ರದೇಶದ ವಾಸ್ತುಶಿಲ್ಪ, ಮೂರ್ತಿಶಿಲ್ಪ, ಶಾಸನಗಳ ಕುರಿತು ಜಾಗೃತಿ ಮೂಡಿಸುವುದಾಗಿದೆ.

**ಅಧ್ಯಯನದ ವ್ಯಾಪ್ತಿ**

ಯಾವುದೇ ಒಂದು ಅಧ್ಯಯನವು ನಿರ್ದಿಷ್ಟ ವ್ಯಾಪ್ತಿಯನ್ನು ಹೊಂದಿರಬೇಕು. ವ್ಯಾಪ್ತಿಯೆಂಬ ಚೌಕಟ್ಟಿನಲ್ಲಿ ಕೆಲಸ ಮಾಡಿದರೆ ಅದೊಂದು ವ್ಯವಸ್ಥಿತ ಅಧ್ಯಯನವಾಗುತ್ತದೆ. ಒಂದು ದೇಶದ ಇತಿಹಾಸದಲ್ಲಿ ಒಬ್ಬ ವ್ಯಕ್ತಿ ಸಮಗ್ರವಾಗಿ ಅಧ್ಯಯನ ಮಾಡುವುದು ಕಷ್ಟಸಾಧ್ಯ. ಆದರೆ ಸಂಸ್ಕೃತಿಯನ್ನು ವ್ಯವಸ್ಥಿತವಾಗಿ ಕಟ್ಟಿಕೊಡುವ ಸಲುವಾಗಿ ವಿವಿಧ ಆಯಾಮಗಳಾಗಿ ವಿಶ್ಲೇಷಣೆ ಮಾಡಲಾಗುತ್ತದೆ.

ಈ ಅಧ್ಯಯನವು ಪ್ರಾಚೀನ ಕಾಲದಿಂದ ಇಂದಿನವರೆಗಿನ ತೆಕ್ಕಲಕೋಟೆಯ ಮಲ್ಲಯ್ಯ ಇತಿಹಾಸ ಮತ್ತು ಪುರಾತತ್ವ ಅಧ್ಯಯನಕ್ಕೆ ಮಾತ್ರ ಸೀಮಿತವಾಗಿದ್ದು ಸಾಂಸ್ಕೃತಿಕ ಸಂದರ್ಭಾನುಚಿತವಾಗಿ ಅಧ್ಯಯನಕ್ಕೆ ಪೂರಕವಾಗಿ ಬೇರೆ ಬೇರೆ ಪ್ರದೇಶದ ಮೈಲಾರ ಕ್ಷೇತ್ರಗಳನ್ನು ಬಳಸಿಕೊಳ್ಳಲಾಗಿದೆ.

## ಅಧ್ಯಯನದ ವಿಧಾನ

ಇಲ್ಲಿಯವರೆಗೆ ಚರಿತ್ರೆಯ ಸಂಶೋಧಕರು ಅಳವಡಿಸಿಕೊಂಡ ವಿಧಿ ವಿಧಾನಗಳನ್ನು ಈ ಪ್ರಸಕ್ತ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ. ಮೊದಲಿಗೆ ಲಭ್ಯ ಪ್ರಕಟಿತ ಮಾಹಿತಿ ಅನುಸರಿಸಿ ಕ್ಷೇತ್ರ ಕಾರ್ಯ ಕೈಗೊಳ್ಳಲಾಗಿದೆ. ಇಲ್ಲಿ ಮುಖ್ಯವಾಗಿ ಸಂದರ್ಶನ, ಪ್ರಶ್ನಾವಳಿ, ಅವಲೋಕನದ ವಿಧಾನಗಳನ್ನು ಅನುಸರಿಸಲಾಗಿದೆ. ತೆಕ್ಕಲಕೋಟೆಯ ಪರಿಸರಕ್ಕೆ ಸಂಬಂಧಿಸಿದಂತೆ ಈಗಾಗಲೆ ಪ್ರಕಟವಾಗಿರುವ ಕೃತಿಗಳು, ಗೆಜೆಟೀಯರ್‌ಗಳು, ಶಾಸನ ಸಂಪುಟಗಳು ಹಾಗೂ ವಿಶ್ವಕೋಶಗಳು ಇತರ ಹಳೆಯ ದಾಖಲೆಗಳನ್ನು ಸಂಗ್ರಹಿಸಿ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದ ಸಾಹಿತ್ಯಿಕ ಆಕರಗಳನ್ನು ಅಧ್ಯಯನ ಮಾಡುವುದರ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಅಲ್ಲದೆ ಕ್ಷೇತ್ರ ಕಾರ್ಯದಲ್ಲಿ ಸಂಶೋಧನ ವಿದ್ವಾಂಸರ ಭೇಟಿ ಹಾಗೂ ಸ್ಥಳೀಯರ ಅಭಿಪ್ರಾಯಗಳನ್ನು ಪರಾಮಾರ್ಶಿಸಲು ಪ್ರಯತ್ನಿಸಿದೆ. ವಿವಿಧ ಗ್ರಂಥಾಲಯ ಕಾರ್ಯದ ಮೂಲಕ ವಿಷಯಕ್ಕೆ ಸಂಬಂಧಿಸಿದ ಸಾಹಿತ್ಯಿಕ ಆಕರಗಳನ್ನು ಅಧ್ಯಯನ ಮಾಡುವುದು ಮತ್ತು ಕ್ಷೇತ್ರ ಕಾರ್ಯದಲ್ಲಿ ಕಂಡುಬರುವ ದೇವಾಲಯಗಳು, ಉತ್ಸವಗಳಿಗೆ ಸಂಬಂಧಿಸಿದ ಛಾಯಾಚಿತ್ರಗಳನ್ನು ಸ್ಥಳದಲ್ಲಿಯೇ ಸಂಗ್ರಹಿಸಿದ್ದು, ಅವುಗಳನ್ನು ಅಧ್ಯಯನದಲ್ಲಿ ಬಳಸಿಕೊಂಡಿದೆ. ಈ ರೀತಿ ಸಂಗ್ರಹಿಸಿದ ಮಾಹಿತಿಯನ್ನು ವಿಮರ್ಶಾತ್ಮಕವಾಗಿ ಚಿಂತಿಸಿ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

## ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನವು ಉದ್ದೇಶ, ವ್ಯಾಪ್ತಿ ಹಿನ್ನೆಲೆಯಲ್ಲಿ ಸಂಶೋಧನಾ ಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಆರು ಅಧ್ಯಾಯಗಳಾಗಿ ವಿಭಾಗಿಸಲಾಗಿದ್ದು. ಪ್ರತಿಯೊಂದು ಅಧ್ಯಯವೂ ಅವಶ್ಯಕತೆಗೆ ತಕ್ಕಂತೆ ಉಪ ವಿಭಾಗಗಳನ್ನು ಒಳಗೊಂಡಿದೆ.

೧. ಮೊದಲನೇ ಅಧ್ಯಾಯವು ಪ್ರಸ್ತಾವನೆ, ಉದ್ದೇಶ, ವ್ಯಾಪ್ತಿ, ವಿಧಾನ, ಸಮೀಕ್ಷೆ ಸ್ವರೂಪವನ್ನು ಕುರಿತು ತಿಳಿಸುವಂತದ್ದಾಗಿದೆ.

೨. ಎರಡನೇ ಅಧ್ಯಾಯನವು ತೆಕ್ಕಲಕೋಟೆಯ ಭೌಗೋಳಿಕ ಪರಿಸರ ಮತ್ತು ಚಾರಿತ್ರಿಕ ಹಿನ್ನೆಲೆಯ ಕುರಿತು ವಿಮರ್ಶಿಸಲಾಗಿದೆ.

೩. ಮೂರನೇ ಅಧ್ಯಾಯನದಲ್ಲಿ ತೆಕ್ಕಲಕೋಟೆಯ ಮೈಲಾರಲಿಂಗನ ಇತಿಹಾಸ, ವಾಸ್ತುಶೈಲಿ, ಮೂರ್ತಿಶಿಲ್ಪಗಳು, ಮತ್ತು ಸ್ಮಾರಕ ಶಿಲ್ಪಗಳ ಕುರಿತು ಚರ್ಚಿಸಲಾಗಿದೆ.

೪. ನಾಲ್ಕನೇ ಅಧ್ಯಾಯನವು ಮೈಲಾರಲಿಂಗ ಪರಂಪರೆಯ ಪ್ರಾಚೀನತೆಯನ್ನು ಶಾಸನಗಳು, ಸಾಹಿತ್ಯ, ಸ್ಮಾರಕಗಳ ಹಿನ್ನೆಲೆಯಲ್ಲಿ ವಿವೇಚಿಸಿದೆ.

೫. ಐದನೇ ಅಧ್ಯಾಯದಲ್ಲಿ ಮೈಲಾರ ಬಗೆಗಿನ ನಂಬಿಕೆಗಳು ಮತ್ತು ಆಚರಣೆಗಳು, ಸಂಪ್ರದಾಯಗಳನ್ನು ಪ್ರಸ್ತುತಪಡಿಸಲಾಗಿದೆ.

೬. ಆರನೇ ಅಧ್ಯಾಯವು ಸಮಾರೋಪವಾಗಿದ್ದು ಈ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ನೀಡಲಾಗುವುದು. ಕೊನೆಯಲ್ಲಿ ಆಧಾರಗ್ರಂಥಗಳು, ನಕ್ಷೆಗಳು, ಛಾಯಾಚಿತ್ರಗಳನ್ನು ಸಂದರ್ಶನ ಸೂಚಿಯ ಸಂಕ್ಷಿಪ್ತರೂಪವನ್ನು ನೀಡಲಾಗಿದೆ

# ಅಧ್ಯಾಯ-೨

## ಭೌಗೋಳಿಕ ಪರಿಸರ ಮತ್ತು ಚಾರಿತ್ರಿಕ ಹಿನ್ನೆಲೆ

ಮಾನವನ ಸಾಮಾಜಿಕ ಸಾಂಸ್ಕೃತಿಕ ಜೀವನದ ಮೇಲೆ ವಾಯುಗುಣ ಹಾಗೂ ಭೌಗೋಳಿಕ ಪರಿಸರಗಳು ಬಹಳಷ್ಟು ಪ್ರಭಾವವನ್ನು ಉಂಟುಮಾಡುತ್ತವೆ. ಭೌತ ಲಕ್ಷಣಗಳಲ್ಲಿನ ಈ ವ್ಯತ್ಯಾಸಗಳು ನೈಸರ್ಗಿಕ ಸನ್ನಿವೇಶದಿಂದ ಸಾಮೂಹಿಕ ಜೀವನದ ಮೇಲೆ ಅಥವಾ ಆ ಸನ್ನಿವೇಶದ ಅಭಾವಕ್ಕೆ ಈಡಾದ ಜನರ ಸಂಸ್ಕೃತಿಯ ಮೇಲೆ ಪರಿಣಾಮವನ್ನುಂಟುಮಾಡುತ್ತವೆ. ಸಾಮಾಜಿಕ ನಡುವಳಿಕೆಗಳು, ಆಚಾರವಿಚಾರಗಳು ಸಹ ಪ್ರಕೃತಿಯನ್ನು ಬಿಟ್ಟು ಭಿನ್ನವಾಗಿರಲು ಸಾಧ್ಯವಿಲ್ಲ. ಒಂದು ನಾಡಿನ ಜನತೆಯ ಸಂಸ್ಕೃತಿಗೂ ಅಲ್ಲಿನ ಭೌಗೋಳಿಕ ಪರಿಸರಕ್ಕೂ ಒಂದು ನಿಕಟ ಸಂಬಂಧವಿರುತ್ತದೆ.

**ಪ್ರೊ.ಮೈಲ್ಡ್ ರಫ್ ಹ್ಯಾಪರ್ ಅವರ ಪ್ರಕಾರ :-** "ಬೆಟ್ಟಗಳು, ನದಿಗಳು, ಮುಖಜ ಪ್ರದೇಶಗಳು, ಫಲವತ್ತಾದ ಮಣ್ಣು ಜಲ ಸಂಪನ್ಮೂಲ, ವಾತಾವರಣದ ಸ್ಥಿತಿಗಳು ಮಾನವನ ಸಮುದಾಯ ಜೀವಿಸಲು ಬೇಕಾದ ಮೂಲ ಅವಶ್ಯಕತೆಗಳಾಗಿವೆ".[೧]

ಈ ದೃಷ್ಟಿಯಿಂದಇತ್ತೀಚಿಗೆ ಭೌಗೋಳಿಕ ಪರಿಸರವನ್ನು ಬಹುಮುಖ್ಯವಾಗಿ ಪರಿಗಣಿಸಲಾಗುತ್ತದೆ.

### ೨.೧ ತೆಕ್ಕಲಕೋಟೆಯ ಭೌಗೋಳಿಕ ಪರಿಚಯ:-

ತೆಕ್ಕಲಕೋಟೆಯು ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲೂಕಿನಲ್ಲಿ ಬರುತ್ತದೆ. ಇದು ಬಳ್ಳಾರಿಯಿಂದ ೪೫ ಕಿ.ಮೀ. ದೂರದಲ್ಲಿದೆ. ಸಮುದ್ರಮಟ್ಟದಿಂದ ಸುಮಾರು ೩೭೦ ಮೀ ಎತ್ತರದಲ್ಲಿದೆ. ಭೂ ಪಟದಲ್ಲಿ ತೆಕ್ಕಲಕೋಟೆಯನ್ನು ಉತ್ತರ ಅಕ್ಷಾಂಶ ೧೫.೩೮೦ ಮತ್ತು ಪೂರ್ವ ರೇಖಾಂಶ ೭೬.೫೪೦ ಗಳ ನಡುವೆ ಗುರುತಿಸಲಾಗಿದೆ. ಈ ತೆಕ್ಕಲಕೋಟೆಯ ಒಟ್ಟು ವಿಸ್ತೀರ್ಣ ೧೩೨೩.೮ ಚದರ ಕಿ.ಮೀ. ಗಳಿವೆ. ತೆಕ್ಕಲಕೋಟೆಯ ಪೂರ್ವ ಮತ್ತು ಉತ್ತರಕ್ಕೆ ಆಂಧ್ರ ಪ್ರದೇಶ, ಪಶ್ಚಿಮಕ್ಕೆ ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕು ಹಾಗೂ ಗಂಗಾವತಿ ತಾಲೂಕುಗಳು ಇರುತ್ತವೆ. ದಕ್ಷಿಣಕ್ಕೆ ಬಳ್ಳಾರಿ ತಾಲೂಕು ಮತ್ತು ನೈಋತ್ಯಕ್ಕೆ ಹೊಸಪೇಟೆ ತಾಲೂಕುಗಳಿವೆ. ಸಿರುಗುಪ್ಪ ತಾಲೂಕನ್ನು ನಾಲ್ಕು ಹೋಬಳಿಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ ಸಿರುಗುಪ್ಪ, ತೆಕ್ಕಲಕೋಟೆ, ಕರೂರು, ಹಚ್ಚೊಳ್ಳಿ ತೆಕ್ಕಲಕೋಟೆಯಲ್ಲಿ ಪಟ್ಟಣ ಪಂಚಾಯಿತಿ ಇದೆ. ೨೦೧೧ ರ ಜನಗಣತಿಯ ಪ್ರಕಾರ ಇಲ್ಲಿ ೪.೮೨೨ ಮನೆಗಳಿದ್ದವು ಎಂದು ಸಮೀಕ್ಷೆ ಮಾಡಲಾಗಿದೆ. ಜನಸಂಖ್ಯೆ ೨೬.೨೨೪, ರಷ್ಟು ಇದೆ. ಅದರಲ್ಲಿ ಪುರುಷರು ೧೨.೯೯, ಮಹಿಳೆಯರು ೧೩.೨೩೧ ಇದೆ.

ತೆಕ್ಕಲಕೋಟೆಯಲ್ಲಿ ಬೇಸಾಯವು ಪ್ರಚಲಿತವಾಗಿತ್ತೆಂಬುದಕ್ಕೆ ಆಧಾರವಾಗಿ ಇಲ್ಲಿನ ಹಿರೇಹರಲು ಬೆಟ್ಟದಲ್ಲಿನ ನವ ಶಿಲಾಯುಗದ ನೆಲೆಯಲ್ಲಿನ ಉತ್ಖನನದಲ್ಲಿ ಹುರುಳಿಕಾಳು ಹಾಗೂ ಭತ್ತದಹೊಟ್ಟು ದೊರೆತಿದೆ. ಇದರಿಂದ ಇವರಿಗೆ ಕೃಷಿಯಬಗ್ಗೆ ಅಪಾರ ಜ್ಞಾನವಿತ್ತೆಂದು ತಿಳಿದುಬರುತ್ತದೆ. ಇಲ್ಲಿ ಭತ್ತ, ಗೋಧಿ, ಜೋಳ, ಮೆಕ್ಕೆಜೋಳ, ತೊಗರಿ, ಸಜ್ಜೆ, ನವಣೆ, ಕಡಲೆ, ಹೆಸರುಕಾಳು, ಅಲಸಂದಿ, ನೆಲಗಡಲೆ ಹಾಗೂ ತರಕಾರಿಗಳನ್ನು ಮತ್ತು ವಾಣಿಜ್ಯ ಬೆಳೆಗಳನ್ನು ಬೆಳೆಯಲಾಗುತ್ತಿತ್ತು.

ತೆಕ್ಕಲಕೋಟೆಯಲ್ಲಿ ಒಂದು ಪ್ರಾಚೀನವಾದ ಕೆರೆಯಿದೆ ಅದನ್ನು ಏಡಿಕೆರೆ ಎಂದು ಕರೆಯುತ್ತಾರೆ. ಪ್ರಸ್ತುತ ಅದು ಹೂತುಹೋಗಿದೆ. ತೆಕ್ಕಲಕೋಟೆಯ ಜನರಿಗೆ ಹೋಸಪೇಟೆಯಿಂದ ಹರಿಯುವ ತುಂಗಭದ್ರಾನದಿಯು ಎರಡು ಬೆಳೆಗಳನ್ನು ಬೆಳೆಯಲು ತುಂಬಾ ಸಹಕಾರಿಯಾಗಿದೆ.

ತುಂಗಭದ್ರಾನದಿ:- ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತಿರುವ ಇದು ಚಿಕ್ಕಮಂಗಳೂರು ಜಿಲ್ಲೆಯ ಪಶ್ಚಿಮ ಬೆಟ್ಟದ ಸಾಲಿನ ವರಹ ಪರ್ವತದಲ್ಲಿ ಉಗಮವಾದ ಎರಡು ಹರಿಗಳು ಶಿವಮೊಗ್ಗ ಜಿಲ್ಲೆಯ ಕೂಡಲಿಯಲ್ಲಿ ಬಂದು ಸೇರುತ್ತವೆ. ಅವುಗಳೆಂದರೆ ಒಂದು ತುಂಗಾ ಇನ್ನೊಂದು ಭದ್ರಾ, ಎರಡೂ ಸೇರಿ ಮುಂದೆ ಸಾಗಿದಾಗ ತುಂಗಭದ್ರಾ ಎಂದು ಕರೆಯಲಾಗಿದೆ. ಈ ನದಿಯ ಉಲ್ಲೇಖ ರಾಮಾಯಣ ಮತ್ತು ಪುರಾಣಗಳಲ್ಲಿ ಬಂದಿದೆ, ಮಹಾಭಾರತದಲ್ಲಿ ಜಾಹ್ನವಿ, ಕೃಷ್ಣವೇಣಿಗಳಜೊತೆಗೆ ತುಂಗಾವೇಣಿ ಎಂಬ ಹೆಸರು ಬರುತ್ತದೆ, ಇಂದಿಗೂ ಪವಿತ್ರ ಕ್ಷೇತ್ರವಾದ ಹಂಪಿಯಲ್ಲಿ ಈ ನದಿಗೆ ಪಂಪಾತೀರ್ಥವೆಂದೇ ಕರೆಯಲಾಗಿದೆ. ಇದರ ನೀರು ಕುಡಿಯಲು ಯೋಗ್ಯವಾಗಿದ್ದುದರಿಂದ **ಗಂಗಾಸ್ನಾನ ತುಂಗಾಪಾನ** ಎಂಬ ನಾಣ್ನುಡಿಯೇ ಬೆಳೆದುಬಂದಿದೆ. ತುಂಗಭದ್ರಾನದಿ ಹೂವಿನಡಗಲಿ ತಾಲೂಕಿನಿಂದ ಬಳ್ಳಾರಿ ಪರಿಸರವನ್ನು ಪ್ರವೇಶಿಸುತ್ತದೆ. ಪಶ್ಚಿಮ, ಉತ್ತರ ಭಾಗದಲ್ಲಿ ಹರಿದಿರುವ ಇದು ಹರಪನಹಳ್ಳಿ, ಹಡಗಲಿ, ಹಗರಿಬೊಮ್ಮನಹಳ್ಳಿ, ಹೊಸಪೇಟೆ ಮತ್ತು ಸಿರುಗುಪ್ಪ ತಾಲೂಕುಗಳನ್ನೊಳಗೊಂಡಂತೆ ೩೨೦ ಕಿ.ಮೀ. ಚಲಿಸಿ ಆಲೂರು ತಾಲೂಕಿನ ತ್ಸಲ್‌ಕೂಡಲೂರು ಗ್ರಾಮದಲ್ಲಿ ಆಂಧ್ರ ಪ್ರದೇಶವನ್ನು ಸೇರುತ್ತದೆ.

ಉಪನದಿಗಳು:- ಅದೇ ರೀತಿಯಾಗಿ ತುಂಗಭದ್ರಾ ನದಿಯನ್ನು ಸೇರುವ ಪ್ರಮುಖವಾದ ಉಪನದಿ **'ಹಗರಿ'** ನದಿಯಾಗಿದೆ. ಈ ನದಿಯು ಚಿಕ್ಕಮಂಗಳೂರು ಜಿಲ್ಲೆಯ ಮಲ್ಲಯ್ಯನಗಿರಿ ಮತ್ತು ಥಂಗಲಿಯಲ್ಲಿಯ ಎರಡು ಸೆಳೆತಗಳನ್ನು ವೇದ ಮತ್ತು ಆವತಿ ಎಂದು ಕರೆಯಲಾಗಿದೆ. ಇವೆರಡೂ ಚಿತ್ರದುರ್ಗ ಜಿಲ್ಲೆಯಲ್ಲಿ ಸೇರಿ ವೇದಾವತಿ ಎಂದು ಕರೆಸಿಕೊಂಡು ನಂತರ ಬಳ್ಳಾರಿ ಜಿಲ್ಲೆಯನ್ನು (ರೂಪನಗುಡಿಯಲ್ಲಿ) ಪ್ರವೇಶಿಸುತ್ತದೆ. ಈ ಪ್ರದೇಶದ ಶಾಸನಗಳು ಇದನ್ನು 'ಹಗರಿ' 'ಆಗ-ಹರಿ' (ಅಘಹರಿ) (ಪಾಪವನ್ನು ತೊಳೆಯುವ) ಎಂದು ಕರೆದಿದೆ. ಈ ಪ್ರದೇಶದಲ್ಲಿ ೯೨.೮ ಕಿ.ಮೀ. ಸಾಗಿ ಸಿರುಗುಪ್ಪ (ತಾ) ಸಿದ್ದರಗಡ್ಡೆ ಹಳ್ಳಿಯಲ್ಲಿ ತುಂಗಾಭದ್ರಾ ನದಿಯನ್ನು ಸೇರುತ್ತದೆ. ವಿಶಾಲವಾಗಿ ಹರಿದಿರುವ ಈ ನದಿನೀರನ್ನು ಪ್ರಾಚೀನ ಕಾಲದಿಂದ ತೋಟಗದ್ದೆಗಳಿಗೆ ಬಳಸಿಕೊಳ್ಳಲಾಗಿದೆ.

ಈ ಪರಿಸರದಲ್ಲಿ ಅನೇಕ ಪ್ರಾಣಿ ಪಕ್ಷಿಗಳು ಕಂಡುಬರುತ್ತವೆ. ಅವುಗಳೆಂದರೆ ಕಾಡುಹಂದಿ, ತೋಳ, ಕರಡಿ, ಮೊದಲಾದ ಕಾಡುಪ್ರಾಣಿಗಳು ಕಂಡುಬರುತ್ತವೆ. ಅಲ್ಲದೆ ಇಲ್ಲಿನ ವಾರ್ಷಿಕ ಮಳೆಯು ಸರಾಸರಿ ೫೭೪.೯ ಮಿ.ಮೀ.ಇರುತ್ತದೆ.[೩]

## ೨.೨ ಐತಿಹಾಸಿಕ ಹಿನ್ನಲೆ

ಕರ್ನಾಟಕದ ನೆಲವು ಪ್ರಾಚೀನ ಮಾನವನ ಬಹುಕಾಲದ ವಸತಿಯಾಗಿತ್ತು. ಪ್ರಾಚೀನ ಶಿಲಾಯುಗ, ನೂತನ ಶಿಲಾಯುಗ ಮತ್ತು ಉತ್ಖನನಗಳಿಂದ ದೊರೆತ ಪುರಾತತ್ವ ವಸ್ತುಗಳಿಂದ ಕರ್ನಾಟಕದಲ್ಲಿ ಜನವಸತಿಯು ಸುಮಾರು ೫೦ ಲಕ್ಷ ವರ್ಷಗ ಹಿಂದಿನಿಂದಲೂ ಇದೆ ಎಂದು ತಿಳಿದುಬರುತ್ತದೆ. ಎಂದಿನಿಂದ ಇಂದಿನವರೆಗೆ ನಿರಂತರವಾಗಿ ಮಾನವನ ನೆಲೆಯಾಗಿರುವ ಕರ್ನಾಟಕದಲ್ಲಿ ರಾಬರ್ಟ್ ಬ್ರೂಸ್‌ಫೂಟ್, ಮಾರ್ಟಿಮರ್ ವೀಲ್ಹರ್, ಮುಂತಾದ ಪಾಶ್ಚಾತ್ಯ

ಸಂಶೋಧಕರು ಮತ್ತು ಅಯ್ಯಂಗರ್, ಡಾ. ಎಂ.ಎಚ್. ಕೃಷ್ಣ, ಡಾ. ಅ. ಸುಂದರ್, ಮುಂತಾದ ಭಾರತೀಯ ಸಂಶೋಧಕರು ಹಲವಾರು ಪ್ರಾಗೈತಿಹಾಸಿಕ ನೆಲೆಗಳನ್ನು ಪತ್ತೆ ಹಚ್ಚಿ ಉತ್ಖನನ ಮಾಡಿ ಅನೇಕ ಹೊಸ ವಿಷಯಗಳನ್ನು ಬೆಳಕಿಗೆ ತಂದಿದ್ದಾರೆ. ಅಲ್ಲದೆ ಇನ್ನೂ ಅನೇಕ ಪ್ರಾಗೈತಿಹಾಸಿಕ ನೆಲೆಗಳಿರುವ ಸುಳಿವು ನೀಡಿದ್ದಾರೆ.[೪] ಅಧ್ಯಯನದ ಅನುಕೂಲಕ್ಕಾಗಿ ತೆಕ್ಕಲಕೋಟೆಯ ಐತಿಹಾಸಿಕ ಹಿನ್ನಲೆಯ್ನು ೨ ಭಾಗಗಳಾಗಿ ಮಾಡಿಕೊಳ್ಳಲಾಗಿದೆ. ೧. ಪ್ರಾಗೈತಿಕ ಇತಿಹಾಸ ಮತ್ತು ೨. ರಾಜಕೀಯ ಇತಿಹಾಸ.

**ಸ್ಥಳನಾಮ:–**

ಅರಸು ಮನೆತನಗಳ ಕಾಲಘಟ್ಟದಿಂದಲೂ ಪ್ರಸಿದ್ಧಿ ಪಡೆದ ತೆಕ್ಕಲಕೋಟೆ ಹಾಗೂ ಈ ಪರಿಸರದ ಸ್ಥಳನಾಮಗಳ ಕುರಿತಾಗಿ ಶಾಸನಗಳು ಮತ್ತು ಐತಿಹ್ಯಗಳು ವಿವಿಧ ರೀತಿಯ ಉಲ್ಲೇಖಗಳನ್ನು ಕೊಡುತ್ತವೆ. ಅದೇ ರೀತಿ ತೆಕ್ಕಲಕೋಟೆ ಪದದ ನಿಷ್ಪತ್ತಿಯ ಕುರಿತಾಗಿ ಶಾಸನಗಳು ಮಾಹಿತಿಯನ್ನು ಒದಗಿಸಿದರೂ ಕೂಡ ಈ ಕುರಿತು ಹಲವು ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಅವುಗಳಲ್ಲಿ ಕೆಲವು ಇಂತಿವೆ.

೧. ಪಾಪೆಕಲ್ಲು, ತೆಕ್ಕೆಕಲ್ಲು, ತೆಕ್ಕಕಲ, ಕ್ರಿ.ಶ.೧೦೨೦, ಕ್ರಿ.ಶ.೧೦೯೨, ಕ್ರಿ.ಶ.೧೧೦೨, ಕ್ರಿ.ಶ. ೧೧೭೩ರ ಶಾಸನಗಳು.[೫]

೨. ತೆಕ್ಕಕಲ್ಲು(ಕ್ರಿ.ಶ.೧೦೯೨)>ತೆಕ್ಕಲಕೋಟೆ(ತೆಕ್ಕೆ(ಅಧಿಕಸುರುಳಿ)+ಕಲ್ಲು>ಕೆಕ್ಕಕಲಲ್ಲು>ತೆಕ್ಕಲ್ಲು>ತೆಕ್ಕಲು> ತೆಕ್ಕಲಕೋಟೆ.[೬]

೩. ತೆಂಕನಾಯ್ಕ ಎಂಬ ಪಾಳೆಗಾರನಿದ್ದು ಅವನು ಸುತ್ತ ಹಳ್ಳಿಗಳನ್ನು ಆಳಿದನಂತೆ. ನಿಜಾಮರ ಹಾವಳಿ ತಡೆಯಲು ತಮ್ಮ ಊರಿನ ಸುತ್ತ ಕೋಟೆ ಕಟ್ಟಿಸಿದನಂತೆ. ಕೋಟೆಯನ್ನು ಕಟ್ಟಿಸಿದ ನಾಯಕನ ಹೆಸರಲ್ಲಿ ಈ ಊರಿಗೆ ಹೆಸರು ಇಟ್ಟು ತೆಂಕನಕೋಟೆ ಎಂದು ಏಳು ಊರುಗಳು ಸೇರಿವೆ. ಇಂದು ಸಹ ಏಳು ಬುಡ್ಡೆಕಲ್ಲು, ಏಳು ಮಸೀದಿಗಳನ್ನು ಮತ್ತು ಏಳು ಅಗಸಿಗಳನ್ನು ಹೊಂದಿರುವುದು ಈ ತೆಂಕನಕೋಟೆ ಎಂದೇ ಕರೆಯುತ್ತಾರೆ ಇದು ಮುಂದೆ ತೆಕ್ಕಲಕೋಟೆಯಾಗಿದೆ. ಎಂಬುದಕ್ಕೆ ಇದು ಒಂದು ಐತಿಹ್ಯ.

೪. ಹಳೆಕೋಟೆಯನ್ನು ಒಬ್ಬ ಪಾಳೆಗಾರ ಆಳುತ್ತಿದ್ದನಂತೆ. ಅವನ ಆಡಳಿತಕ್ಕೆ ಸುತ್ತಲೂ ಇರುವ ಗ್ರಾಮಗಳು ಸೇರಿದ್ದವಂತೆ. ಹಳೆಕೋಟೆಯನ್ನು ಆಳುವಾಗ ಇಲ್ಲಿ ಒಂದು ಕೋಟೆಯನ್ನು ಕಟ್ಟಿಸಿದ. ಹಳೆಕೋಟೆಯಿಂದ ಇದು ತೆಂಕಣದಿಕ್ಕು ಆಗುತ್ತದೆ. ಅದಕ್ಕಾಗಿ ಇಲ್ಲಿ ಕೋಟೆಯಿರುವ ದಿಕ್ಕು ತೆಂಕಣ ಹಾಗಾಗಿ ತೆಂಕನಕೋಟೆ ಎಂದು ಹಳೇಕೋಟೆ ಪಾಳೆಗಾರರು ಕರೆಯುತ್ತಿದ್ದರು. ಈಗ ತೆಂಕನಕೋಟೆ ಹೋಗಿ ತೆಕ್ಕಲಕೋಟೆಯಾಗಿದೆ.[೭]

೫. ತೆಕ್ಕಲಕೋಟೆ ಗ್ರಾಮದ ಸುತ್ತಲೂ ಗುಡ್ಡ, ಬೆಟ್ಟಗಳಿದ್ದು ಕೋಟೆಯಂತೆ ರಕ್ಷಣೆ ನೀಡಿದೆ. ಬೆಟ್ಟದಲ್ಲಿರುವ ಕಲ್ಲುಗಳು ಚಕ್ಕೆಯಂತೆ ಜೋಡಿಸಿರುವ ರೀತಿಯಲ್ಲಿ ಇರುವುದರಿಂದ ತೆಕ್ಕೆಕಲ್ಲು-ತೆಕ್ಕಲು ಇದ್ದಿದ್ದು ಮುಂದೆ ತೆಕ್ಕಲಕೋಟೆಯಾಗಿದೆ.

೬. ಕ್ರಿ.ಶ. ೧೦೨೦ ರ ಶಾಸನದಲ್ಲಿ ಬ್ರಹ್ಮಾದಿರಾಜನು ಊರೊಡೆಯರಿಗೆ ವ್ಯವಸಾಯದ ಮೇಲಿನ ಕೆಲವು ತೆರಿಗೆಗಳನ್ನು ಬಿಟ್ಟಿದ್ದನ್ನು ತಿಳಿಸುತ್ತದೆ. ಈ ಶಾಸನದಲ್ಲಿ ತೆಕ್ಕಲಕೋಟೆಯನ್ನು "ಪಾಪೆಕಲ್ಲು" ಎಂದು ಕರೆದಿದೆ.[೮]

೭. ಕ್ರಿ.ಶ. ೧೫೧೧ ರಲ್ಲಿ ಹೊರಡಿಸಲಾಗಿದ್ದ ಶಾಸನವು ಶ್ರೀ ಕೃಷ್ಣದೇವರಾಯರದಾಗಿದ್ದು ತೆಕ್ಕಲಕೋಟೆಯ ಅಮರೇಶ್ವರ ದೇವಸ್ಥಾನದಲ್ಲಿ ದೊರೆತಿದೆ. ಇದು ಕೃಷ್ಣದೇವರಾಯರಿಗೆ ಧರ್ಮವಾಗಬೇಕೆಂದು ತೆಕ್ಕಲಕೋಟೆಗೆ ಸಂಬಂಧಿಸಿದ ಗ್ರಾಮಗಳ ಸುಂಕವನ್ನು ಮನ್ನಮಾಡಿದ ಉಲ್ಲೇಖವಿದೆ. ಈ ಶಾಸನದಲ್ಲಿ ತೆಕ್ಕಲಕೋಟೆಯನ್ನು 'ಹೆಕ್ಕಲಕೋಟೆ' ಎಂದು ಕೆರೆಯಲಾಗಿದ್ದು, ಈ ತೆಕ್ಕಲಕೋಟೆಯು ಹಸ್ತಿನಾವತಿಯ ವೇಂಟಿಗೆ ಸೇರಿಸುತ್ತೆಂದು ತಿಳಿಸಲಾಗಿದೆ. ಕಾಲಾಂತರದಲ್ಲಿ ಹೆಕ್ಕಲಕೋಟೆ ಇದ್ದಿದ್ದು ತೆಕ್ಕಲಕೋಟೆಯಾಗಿದೆ.[೯]

೮. ಕ್ರಿ.ಶ. ೧೫೩೯ ರ ಮಲ್ಲಯ್ಯನ ಗುಡ್ಡದ ಶಾಸನ (ತೇರಿನ ಮನೆ ಎದುರುಗಡೆ ನಿಲ್ಲಿಸಲಾಗಿದೆ) ಅಚ್ಯುತರಾಯನಿಗೆ ಪುಣ್ಯವಾಗಬೇಕೆಂದು 'ಪಯಜರಯ್ಯನು' ಹರವಿನ ದೇವರ ನೈವೇಧ್ಯಕ್ಕೆ ಹಿಂದಿನ ಧಾನವನ್ನು ಪುನರ್ದತ್ತಿಯಾಗಿ ನೀಡಿದ ಉಲ್ಲೇಖವಿದೆ. ಈ ಶಾಸನದಲ್ಲಿ ತೆಕ್ಕಲಕೋಟೆಯನ್ನು 'ತೆಂಕಲಕೋಟೆ' ಎಂದು ನಮೂದಿಸಲಾಗಿದೆ. ನಂತರದಲ್ಲಿ ಇದು ತೆಕ್ಕಲಕೋಟೆಯಾಗಿದೆ.[೧೦]

೯. ತೆಕ್ಕಕಲ್ಲು ಎಂಬುದು ಇಂದಿನ ಸಿರುಗುಪ್ಪ ತಾಲೂಕಿನ ಪ್ರಮುಖ ಪಟ್ಟಣವಾದ 'ತೆಕ್ಕಲಕೋಟೆಯಾಗಿದೆ'. ಇದು ಪ್ರಾಚೀನ ತೆಕ್ಕಕಲ್ಲು ೧೨ ರ ಕೇಂದ್ರ ಪಟ್ಟಣವಾಗಿತ್ತು. ಸಿರುಗುಪ್ಪ ಶಾಸನದಲ್ಲಿ "ಬಲ್ಲಕ....ನೂರರ ಬಳಿಯ ತೆಕ್ಕಕಲ್ಲು ಬಲ್ಲಕುಂದೆ ಮುನ್ನೂರರ ಬಳಿಯ ತೆಕ್ಕಲಕೋಟೆ ಹನ್ನೆರಡರಲ್ಲಿಯ ಭತ್ತಗ್ರಾಮ ಸಿರುಗುಪ್ಪೆ ಎಂದು ಕಟ್ಟಿಕೊಡಬಹುದು". ಭತ್ತಗ್ರಾಮ ಎಂದರೆ ಅದು ಒಂದು ಇನಾಮು ಅಥವಾ ಜಹಗೀರು ಗ್ರಾಮವಾಗಿತ್ತೆಂದು ಹೇಳಬಹುದು.[೧೧]

## ಪ್ರಾಗಿತಿಹಾಸ ಕಾಲ

ಫಲವತ್ತಾದ ಭೂಮಿ ದೊಡ್ಡ ದೊಡ್ಡ ಬಂಡೆಗಳನ್ನು ಹೊತ್ತ ಬೆಟ್ಟಗಳು, ನಿಸರ್ಗ ನಿರ್ಮಿತ ಮತ್ತು ಕೊರೆದು ತಯಾರಿಸಿದ ಗವಿಗಳು, ತಾಮ್ರ, ಕಬ್ಬಿಣ, ಚಿನ್ನದ ಅದಿರು, ತುಂಗಭದ್ರಾ ಮತ್ತು ಅದರ ಉಪನದಿಗಳ ನೀರಿನ ಸರಬರಾಜು, ಕಾಡು ಮೊದಲಾದ ಭೌಗೋಳಿಕ ಅನುಕೂಲತೆಗಳಿಂದ ಪ್ರಾಗಿತಿಹಾಸ ಕಾಲದಿಂದಲೂ ಮಾನವನ ವಾಸಸ್ಥಾನವಾಗುವುದಕ್ಕೆ ಕಾರಣವಾಯಿತು. ಈ ಪ್ರದೇಶದಲ್ಲಿ ಕೈಗೊಂಡ ಕ್ಷೇತ್ರಕಾರ್ಯ ಮತ್ತು ಉತ್ಖನನಗಳಿಂದ ಕಂಡುಬಂದಿರುವ ಪ್ರಾಗಿತಿಹಾಸ ಕಾಲದ ಅವಶೇಷಗಳಿಂದ ಎರಡು ಹಂತದ ಸಂಸ್ಕೃತಿಯನ್ನು ಗುರುತಿಸಲಾಗಿದೆ.

ತೆಕ್ಕಲಕೋಟೆಯು ಬಳ್ಳಾರಿಯಿಂದ ದಕ್ಷಿಣಕ್ಕೆ ೪೫ ಕಿ.ಮೀ ಆದೋನಿಯಿಂದ ೬ ಕಿ.ಮೀ. ದೂರದಲ್ಲಿದೆ. ನವಶಿಲಾಯುಗ, ಶಿಲಾ ತಾಮ್ರಯುಗ ಸಂಸ್ಕೃತಿಯ ಕಾಲಘಟಕ್ಕೆ ಸೇರಿದ ನೆಲೆಯಲ್ಲಿ ೧೯೧೬ ರಲ್ಲಿ ರಾಬರ್ಟ್ ಬ್ರೂಸ್‌ಪೂಟ್, ಆದಿಮಾನವನಿಗೆ ಸಂಬಂಧಿಸಿದ ಕೆಲ ಅವಶೇಷಗಳನ್ನು ಶೋಧಿಸಿದ್ದರು. ನಂತರ ೧೯೬೩ ರಲ್ಲಿ ಇಲ್ಲಿ ಕೆ.ಸಿ. ಮೆಲ್ಹೋತ್ರ, ಎಂ.ಎಸ್. ನಾಗರಾಜರಾವ್ ಅವರ ನಿರ್ದೇಶನದಲ್ಲಿ ಉತ್ಖನನ ನಡೆಸಿ ಮಡಿಕೆಗಳು, ಬ್ಲೇಡುಗಳು ಮೊದಲಾದ ಶಿಲಾಯುಧಗಳನ್ನು ಮತ್ತು ಆದಿಮಾನವನ ವಾಸ ಸ್ಥಾನವನ್ನು ಗುರ್ತಿಸಿದರು. ತರುವಾಯ ೧೯೬೩-೬೪ ರಲ್ಲಿ ಹೆಚ್.ಡಿ. ಸಂಕಾಲಿಯಾರವರು ಸ್ನಾತಕೋತ್ತರ ಪರಿಶೋಧನಾ ಸಂಸ್ಥೆ, ಪುಣೆ ಮತ್ತು ಕನ್ನಡ ಅಧ್ಯಯನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ಇವರ ಸಂಯುಕ್ತ ಆಶ್ರಯದಲ್ಲಿ ಉತ್ಖನನ ನಡೆಸಿದರು.

ಈ ನೆಲೆಯಲ್ಲಿ ತಾಮ್ರದ ಸುರುಳಿ, ಕಲ್ಲಿನಕೊಡಲಿ, ಜಿಂಕೆಯ ಕವಲು ಕೊಂಬು, ಮೇಗಿಗಳು, ಬ್ಲೇಡುಗಳು, ಸ್ಪಟಿಕದ ಶಿಲೆ ಹಾಗೂ ಚಿನ್ನದ ಮಗ್ರಿಪಟ್ಟಿ, ಕಲ್ಲು ಮುಳ್ಳುಗಳು, ಬೂದು ಬಣ್ಣದ ಮಡಿಕೆ, ಹಳದಿ ಬಣ್ಣದ ಮಡಕೆಗಳು, ಕಪ್ಪು, ಕೆಂಪು, ಕಂದು ಬಣ್ಣದ ಕಪ್ಪು ಮಿಶ್ರಿತ ಮಡಿಕೆಗಳು ದೊರೆತಿದ್ದು, ಅಂದಿನ ಜೀವನ ಕ್ರಮವನ್ನು ಅರಿಯಲು ಸಹಾಯಕವಾಗಿದೆ.

ಈ ನೆಲೆ ನೂತನ ಶಿಲಾಯುಗ ಸಂಸ್ಕೃತಿಯ ವಾಸದ ನೆಲೆಯಾಗಿತ್ತು. ಈ ಸಂಸ್ಕೃತಿಯ ಜನರ ದೈನಂದಿನ ಜೀವನದ ಸ್ವರೂಪ ಮತ್ತು ಲಕ್ಷಣಗಳನ್ನು ತಿಳಿಯುವ ಉದ್ದೇಶವನ್ನು ಇಟ್ಟುಕೊಂಡು ಉತ್ಖನನ ಕೈಗೊಳ್ಳಲಾಗಿತ್ತು. ಉತ್ಖನನದ ನಂತರ ಶಿಲಾಯುಗ ಸಂಸ್ಕೃತಿಯ ಬೆಳವಣಿಗೆಯಲ್ಲಿ ಎರಡು ಹಂತಗಳನ್ನು ಗುರುತಿಸಲಾಯಿತು.

೧. ಶಿಲಾ ತಾಮ್ರ ಹಂತದಲ್ಲಿಯ ನೂತನ ಶಿಲಾಯುಗ ಸಂಸ್ಕೃತಿ

೨. ಈ ಸಂಸ್ಕೃತಿಯ ಅಂತ್ಯದ ಪ್ರಾಚೀನ ಹಂತ

**೧. ಶಿಲಾ ತಾಮ್ರ ಹಂತದಲ್ಲಿನ ನೂತನ ಶಿಲಾಯುಗ ಸಂಸ್ಕೃತಿ :-**

ಆದಿ ಹಂತದಲ್ಲಿ ಬ್ರಹ್ಮಗಿರಿ ಮತ್ತು ಪಿಕ್ಲಿಹಾಳ್ ಮೊದಲಾದ ನೆಲೆಗಳಲ್ಲಿ ಕಂಡುಬಂದಂತೆ ಇಲ್ಲಿಯೂ ತಾಮ್ರದ ಉಪಕರಣಗಳನ್ನು, ಆಭರಣಗಳನ್ನು ಉಪಯೋಗಿಸುತ್ತಿದ್ದ ಅಂಶ ಸ್ಪಷ್ಟವಾಯಿತು. ಈ ಸಂಸ್ಕೃತಿಯ ಜನರು ಸಾಮಾನ್ಯವಾಗಿ ಇಂದಿನ ಸಿರುಗುಪ್ಪ ಮೊದಲಾದ ಗ್ರಾಮಗಳಲ್ಲಿಯ 'ಬೋರಿಯಾ' ಜನಾಂಗದವರು ತಮ್ಮ ವಾಸಕ್ಕಾಗಿ ವೃತ್ತಾಕಾರದ ಗುಡಿಸಲುಗಳನ್ನು ಕಟ್ಟಿಕೊಳ್ಳುತ್ತಿದ್ದರೆಂಬ ಅಂಶವನ್ನು ಉತ್ಖನನದಲ್ಲಿ ಶೋಧಿಸಲಾಯಿತು.

ಇಲ್ಲಿನ ವಸತಿಗಳ ತಳಹದಿಯನ್ನು ಹದಗೊಳಿಸಿ ನಂತರ ಚಿಕ್ಕ ಚಿಕ್ಕ ಕಲ್ಲುಗಳನ್ನು ಹಾಕಿ ಅದರ ಮೇಲೆ ಮಣ್ಣನ್ನು ಉಜ್ಜಿ ಗಟ್ಟಿಗೊಳಿಸಲಾಗುತ್ತಿತ್ತು ಮತ್ತು ಬಿದಿರು ಬೊಂಬು ಹಾಗೂ ತಡಿಕೆ ಬಳಸಿಕೊಂಡು ಮನೆ ನಿರ್ಮಿಸುತ್ತಿದ್ದರೆಂಬ ಅಂಶವನ್ನು ಇದೇ ಉತ್ಖನನದಲ್ಲಿ ಗುರ್ತಿಸಲಾಯಿತು. ಒಂದು ಮನೆಯಲ್ಲಿ ಆಯತಾಕಾರದ ಗುಂಡಿಯಲ್ಲಿ ಶವ ಇದ್ದುದೂ ಶೋಧವಾಗಿದ್ದು ಸಾಮಾನ್ಯವಾಗಿ ಈ ಜನರು ಶವ ಕುಣಿಗಳಲ್ಲಿ ಶವಗಳನ್ನಿಟ್ಟು ಸಂಸ್ಕಾರ ಮಾಡುವ ಪದ್ಧತಿಯನ್ನು ರೂಢಿಸಿಕೊಂಡಿದ್ದರು.

ಆದರೆ ಸಾಮಾನ್ಯವಾಗಿ ಈ ಜನರು ಮನೆಯ ಹೊರಗಡೆ ಶವಸಂಸ್ಕಾರ ಮಾಡುವ ಪದ್ಧತಿ ಇಟ್ಟುಕೊಂಡಿದ್ದರೆಂಬ ಅಂಶವನ್ನು ಇದೇ ವೇಳೆ ಗುರ್ತಿಸಲಾಯಿತು. ಮನೆಯ ಸಮೀಪದಿಂದಲೇ ನಾರಿಹಳ್ಳಕ್ಕೆ ಹೋಗುವ ದಾರಿ ಮತ್ತು ಮನೆಯ ಸುತ್ತ ಇದ್ದ ಎತ್ತರದ ಗೋಡೆ ಮತ್ತು ಪ್ರವೇಶದ್ವಾರವನ್ನು ಇದೇ ಸಮಯದಲ್ಲಿ ಶೋಧಿಸಲಾಯಿತು. ಈ ರೀತಿಯ ವಸತಿ ನೆಲೆ ಕರ್ನಾಟಕದಲ್ಲಿ ದೊರೆತಿರುವುದು ಇಲ್ಲಿನ ವಿಶೇಷವಾಗಿದೆ.[೧೨]

ಶವ ಸಂಸ್ಕಾರ ಮಾಡುವಲ್ಲಿ ವಿಶೇಷವೆಂದರೆ ಕಪ್ಪು ಮತ್ತು ಕೆಂಪು ವರ್ಣದ ಬಟ್ಟಲುಗಳನ್ನು ತಪ್ಪದೆ ಇಡುತ್ತಿದ್ದರು. ಕೆಲವು ನಿರ್ದೇಶನಗಳಲ್ಲಿ, ಇಂಥ ಕಪ್ಪು-ಕೆಂಪು ದ್ವಿವರ್ಣ ಬಟ್ಟಲುಗಳು ಶ್ವೇತವರ್ಣ ರೇಖೆಗಳಿಂದ ರಂಜಿತವಾಗಿರುತ್ತಿದ್ದವು. ಅಲ್ಲದೆ ಶವವನ್ನು ಅಡ್ಡವಾಗಿ ತಳ ಒಡೆದು ಸಾಲಾಗಿ ಜೋಡಿಸಿದ ಮಡಿಕೆಗಳಲ್ಲಿಟ್ಟು, ಗುಂಡಿಗಳಲ್ಲಿ ಹೂಳುವ ನಿರ್ದಶನಗಳು ತೆಕ್ಕಲಕೋಟೆಯಲ್ಲಿವೆ. ವಯಸ್ಕರನ್ನು ೫ ಮಡಿಕೆಗಳಲ್ಲಿಯೂ ಮಕ್ಕಳನ್ನು ಒಂದು ಅಥವಾ ಎರಡು ಮಡಿಕೆಗಳಲ್ಲಿಯೂ ಸಮಾಧಿ ಮಾಡುವುದು ಇಲ್ಲಿ ಕಂಡುಬಂದಿದೆ. ಎಲ್ಲಾ ಸಮಾಧಿಗಳು ಜನ ವಾಸಮಾಡುತ್ತಿದ್ದಲ್ಲಿಯೇ ಕಂಡುಬಂದಿವೆ. ಕೆಲವು ವೇಳೆ ಅವರು ವಾಸಿಸುತ್ತಿದ್ದ ಗುಡಿಸಲಿನ ನೆಲದಲ್ಲಿಯೇ ಹೆಣವನ್ನು ಹುಗಿದಿದ್ದಾರೆ. ಸಮಾಧಿ ಮಾಡಿದ ಗುಂಡಿಗಳಲ್ಲಿ ಬಹುಶಃ ಆಹಾರಪೂರಿತ ಪಾತ್ರೆಗಳನ್ನು ಇಡಲಾಗುತ್ತಿತ್ತು. ಇದು ಇವರಿಗೆ ಮರಣೋತ್ತರ ಜೀವನದಲ್ಲಿ ನಂಬಿಕೆ ಇತ್ತೆಂಬುದನ್ನು ತೋರಿಸುತ್ತದೆ.

ಈ ತರದ ಸಮಾಧಿಗಳು ಮಹರಾಷ್ಟ್ರದ ಸಮಕಾಲೀನ ನೆಲೆಗಳಾದ ಬಹಾಳ್-ಟೇಕವಾಡ, ನೆವಾಸ, ಹೈದರಬಾದ್ ಮತ್ತು ಚಂದೋಳಿಗಳಲ್ಲಿ ದೊರೆತಿವೆ. ಇವುಗಳ ಆಧಾರದ ಮೇಲೆ ಕರ್ನಾಟಕದ ನವಶಿಲಾಯುಗದ ಜನಾಂಗಕ್ಕೂ ಮಹರಾಷ್ಟ್ರದ ಶಿಲಾ-ತಾಮ್ರದ ಜನಾಂಗಕ್ಕೂ ಪರಸ್ಪರ ಸಾಂಸ್ಕೃತಿಕ ಸಂಬಂಧವಿತ್ತೆಂದು ಊಹಿಸಬಹುದು.[೧೩]

## ೨. ಈ ಸಂಸ್ಕೃತಿಯ ಅಂತ್ಯದ ಪ್ರಾಚೀನ ಹಂತ

ಎರಡನೇ ಹಂತದಲ್ಲಿ ಈ ನೆಲೆಯಲ್ಲಿನ ಜನರು ಹೊರಗಿನಿಂದ ಬಂದ ಜನರೊಡನೆ ಸಂಪರ್ಕವಿಟ್ಟುಕೊಂಡಿದ್ದರೆಂಬ ಅಂಶವನ್ನು ತಿಳಿಯಬಹುದಾಗಿದೆ. ಈ ಹಂತದ ಜನರು ಗೋದಾವರಿ ನದಿ ಪ್ರದೇಶದಲ್ಲಿನ ಶಿಲಾ ತಾಮ್ರ ಹಂತದಲ್ಲಿದ್ದ ಜನರ ವಸತಿ ನೆಲೆಗಳ ಮಾದರಿಯಲ್ಲಿ ತಮ್ಮ ವಸತಿಗಳನ್ನು ನಿರ್ಮಿಸಿಕೊಳ್ಳುತ್ತಿದ್ದರು. ಅಲ್ಲದೆ ಈ ಅವಧಿಯಲ್ಲಿ ಕಟ್ಟಿಕೊಂಡ ಮನೆಗಳಿಗೂ ನಾಸಿಕ್, ಜೋರ್ವೇ, ದಯಾಲ್‌ಬಾಗ್, ಮೊದಲಾದೆಡೆ ದೊರೆತ ಮನೆಗಳಿಗೂ ಸಾಕಷ್ಟು ಹೋಲಿಕೆಗಳಿವೆ.[೧೪] ಈ ಕಾಲದ ನಯಮಾಡಿದ ಕಲ್ಲಿನ ಕೊಡಲಿಗಳು, ಚಕಮಿಕಿ ಕಲ್ಲಿನ ಉಪಕರಣಗಳು, ತಾಮ್ರದ ಉಪಕರಣಗಳು, ಎಲುಬಿನ ಆಯುಧಗಳು, ಭಂಗಾರದ ಆಭರಣಗಳು, ಅನೇಕ ವಿಧವಾದ ಮಣಿಗಳು, ಕಂದುಬಣ್ಣದ ಹೊಳಪಿನ ಮಣ್ಪಾತ್ರೆಗಳು ದೊರೆತಿವೆ. ಕೆಲವು ವೇಳೆ ಮಡಿಕೆಗಳನ್ನು ಸುಟ್ಟು ಆನಂತರ ಕೆಮ್ಮಣ್ಣಿನ ದ್ರವವನ್ನು ಅಂಚುಗಳಲ್ಲಿ ಸವರಿ ಅವನ್ನು ಅಲಂಕರಿಸಲಾಗಿದೆ. ಈ ಕಾಲದ ಕೆಲವು ಶವಕುಣಿಗಳು ಸಹ ದೊರೆತಿವೆ.

**ಮೃಣ್‌ಪಾತ್ರೆಗಳು :-**

ಉತ್ಖನನದಲ್ಲಿ ಅಲಂಕೃತ ಮೃತ್ಪಾತ್ರೆಗಳು ಪ್ರಮುಖವಾಗಿ ದೊರಕಿದ್ದು, ಅವು ಇಂತಿವೆ.

೧. ಚಿತಾಭಸ್ಮವನ್ನು ಇಟ್ಟಿರುವ ಕುಂಭಗಳು

೨. ಅಸ್ಥಿ, ಮೃತ್ಪಾತ್ರೆಗಳು

೩. ಮಕ್ಕಳ ಮತ್ತು ದೊಡ್ಡವರ ಅಸ್ಥಿಗಳು

ಮಣ್ಪಾತ್ರೆಗಳಲ್ಲಿ ತಿಗುರಿಯ ಉಪಯೋಗ ತೀರ ಕಡಿಮೆ.

ಮಡಿಕೆಯನ್ನು ಕೈಯಿಂದಲೇ ರೂಪಿಸುತ್ತಿದ್ದರು. ಕಾಳುಗಳನ್ನು ಶೇಖರಿಸಲು ಬಳಸುತ್ತಿದ್ದ ದೊಡ್ಡ ರಂಜಣಿಗೆಗಳು, ದುಂಡು ಮಡಿಕೆಗಳು ಮತ್ತು ಬಟ್ಟಲುಗಳು ದೊರೆತಿವೆ. ಕೆಲವು ಪಾತ್ರೆಗಳ ತಳಭಾಗದಲ್ಲಿ ರಂಧ್ರಗಳಿವೆ. ದೊಡ್ಡ ಮಡಿಕೆಗಳನ್ನು ಸಮಾಧಿಗಳಲ್ಲೂ ಉಪಯೋಗಿಸುತ್ತಿದ್ದರು. ಕಪ್ಪು ಮತ್ತು ಕೆಂಪು ದ್ವಿವರ್ಣ ಬಟ್ಟಲುಗಳನ್ನು ವಿಶೇಷವಾಗಿ ಸಮಾಧಿಗಳಲ್ಲಿ ಉಪಯೋಗಿಸುತ್ತದ್ದರು. ಉತ್ಖನನದಲ್ಲಿ ಆಕಳು, ಕುರಿ, ಜಿಂಕೆ, ಅಳಿಲು ಮತ್ತು ಇಲಿಗಳ ಎಲುಬುಗಳು ದೊರೆತಿವೆ. ಕೆಲವು ಪ್ರಾಣಿಗಳನ್ನು ಅಹಾರಕ್ಕಾಗಿ ಉಪಯೋಗಿಸಿದ್ದಿರಬಹುದು. ಅನೇಕ ಸುಟ್ಟ ಎಲುಬುಗಳು ದೊರೆತಿರುವುದರಿಂದ ಮಾಂಸವನ್ನು ಸುಟ್ಟು ತಿನ್ನುತ್ತಿದ್ದರೆಂದು ಹೇಳಬಹುದು.

ಈ ಜನ ವ್ಯವಸಾಯವನ್ನು ಮಾಡುತ್ತಿದ್ದರು ಎನ್ನುವುದಕ್ಕೆ ಉತ್ಖನನದಲ್ಲಿ ದೊರೆತಿರುವ ಹುರುಳಿಕಾಳು ಇದಕ್ಕೆ ಸಾಕ್ಷಿ. ನುಣುಪುಕಲ್ಲಿನ ಕೈಗೊಡಲಿಗಳು, ಮತ್ತು ಚಕಮಿಕಿ ಕಲ್ಲಿನ ಹರಿತವಾದ ಸಣ್ಣ ಉಪಕರಣಗಳನ್ನು ತಮ್ಮ ನೆಲೆಯಲ್ಲಿಯೇ ತಯಾರಿಸಿಕೊಳ್ಳುತ್ತದ್ದರು. ಇವಲ್ಲದೆ ಎಲುಬಿನ ಆಯುಧಗಳು, ತಾಮ್ರದ ಕೊಡಲಿ ಮತ್ತು ಮೀನಿನ ಗಾಳಗಳು ದೊರೆತಿವೆ. ಇಲ್ಲಿ ಸಿಕ್ಕಿರುವ ಸುಟ್ಟಮಣ್ಣಿನ, ಎಲುಬಿನ ಮತ್ತು ಹರಳಿನ ಮಣಿಗಳು ನವಶಿಲಾಯುಗದ ಜನರ ಅಲಂಕಾರ ಪ್ರಿಯತೆಯನ್ನು ತೋರಿಸುತ್ತದೆ. ಚಿನ್ನದ ಕಿವಿಯ ಆಭರಣಗಳು ದೊರೆತಿವೆ.[೧೫]

**ಆಭರಣ ತಯಾರಿಕೆ**

ನವ ಶಿಲಾಯುಗದಲ್ಲಿ ಮಾನವರು ಬಂಗಾರ, ತಾಮ್ರ ಮತ್ತು ಎಲುಬಿನಿಂದ ಅನೇಕ ಆಭರಣಗಳನ್ನು ತಯಾರಿಸುತ್ತಿದ್ದರು ಇದಕ್ಕೆ ಸಾಕ್ಷಿ ಎಂಬಂತೆ ತೆಕ್ಕಲಕೋಟೆಯಲ್ಲಿ ದೊರೆತಿರುವ ದೊಡ್ಡ ಬಂಗಾರದ ಆಭರಣಗಳಾದ ಜೋತು ಬಿದ್ದಿರುವ ಆಭರಣಗಳು ಕಿವಿಯ ಆಭರಣಗಳು, ಹಾಗೂ ಶವಕುಣಿಯಲ್ಲಿ ದೊರಕಿರುವ ಅಸ್ಥಿಗಳ ಕಿವಿಯ ಭಾಗದಲ್ಲಿ ಎಲುಬಿನಿಂದ ತಯಾರಿಸಿದ ಕಿವಿಯೋಲೆ ಮತ್ತು ತಾಮ್ರದಿಂದಲೂ ಸಹ ಆಭರಣಗಳನ್ನು ತಯಾರಿಸುತ್ತಾರೆಂದು ಗುರ್ತಿಸಲಾಗಿದೆ.

**ಮಣಿ ತಯಾರಿಕೆ**

ತೆಕ್ಕಲಕೋಟೆಯಲ್ಲಿ ಉತ್ಖನನ ನಡೆಸಿದಾಗ ನವ (ನೂತನ) ಶಿಲಾಯುಗದ ಸುಮಾರು ೧೫ ಮಣಿಗಳು ದೊರೆತಿವೆ.

| Sl.No | Materials | Phase I | Phase II |
|---|---|---|---|
| 01 | Steatite | 02 | 01 |
| 02 | Cornelian | 01 | 06 |
| 03 | Green Stone | 01 | 01 |
| 04 | Argillite | 01 | - |
| 05 | Shell | 01 | 01 |
| 06 | Glass | - | - |
| Total | | 06 | 09 |

ಮಣಿಗಳ ತಯಾರಿಕೆಗೆ ಬಳಸುತ್ತಿದ್ದ Steatite ಕಲ್ಲುಗಳು ಬಳ್ಳಾರಿಯ ಸುತ್ತ ಮುತ್ತ ದೊರೆಯುತ್ತಿದ್ದರಿಂದ ಅವರು ಇದರ ಅನುಕೂಲ ಪಡೆದು ಸ್ವತಃ ಮಣಿಗಳನ್ನು ತಯಾರಿಸುತ್ತಿದ್ದರೆಂದು ಗುರ್ತಿಸಲಾಗಿದೆ.[೧೬]

**ತೆಕ್ಕಲಕೋಟೆಯ ಸ್ತರಗಳ ಅಧ್ಯಯನ**

ಉತ್ಖನನದಲ್ಲಿ ಸ್ತರಗಳ ಅಧ್ಯಯನ ಕೈಗೊಳ್ಳಲಾಗಿದೆ. ಇಲ್ಲಿನ ಸ್ತರಗಳಲ್ಲಿ ದೊರೆತ ವಿವಿಧ ಅವಶೇಷಗಳ ವಿವಿರ ಇಂತಿದೆ.

೧. ಮೊದಲನೆಯ ಸ್ತರದಲ್ಲಿ ಕಂಚಿನ ಅವಶೇಷಗಳಾದ ತಾಮ್ರದ ಸುರುಳಿ ನವಶಿಲಾಯುಗ ಸಂಸ್ಕೃತಿಯ ಶಿಲಾಯುಧಗಳು ಬೂದು ಬಣ್ಣದ ಮಡಕೆ ಕಪ್ಪು ಮಿಶ್ರಿತ ಮಡಕೆಗಳು ದೊರೆತಿವೆ.

೨. ಎರಡನೇ ಸ್ತರದಲ್ಲಿ ಮಧ್ಯ ಶಿಲಾಯುಗ ಸಂಸ್ಕೃತಿಯ ಶಿಲಾಯುಧಗಳು ದೊರೆತಿವೆ.

೩. ಮೂರನೇ ಪದರಿನಲ್ಲಿ ಕಲ್ಲಿನ ಕೈ ಕೊಡಲಿ, ಸಜ್ಜೆ, ನೆಲ್ಲು, ಮೊದಲಾದ ಧಾನ್ಯಗಳು

೪. ನಾಲ್ಕನೇ ಪದರಿನಲ್ಲಿ ನವ ಶಿಲಾಯುಗ ಸಂಸ್ಕೃತಿಯ ಬ್ಲೇಡುಗಳು, ತಾಮ್ರದ ಕೊಡಲಿ, ಮಚ್ಚುಗಳು ದೊರೆತಿವೆ.

೫. ಐದನೇ ಪದರಿನಲ್ಲಿ ಮಡಕೆಗಳು, ಶಿಲಾಯುಧಗಳು, ಕೈಕೊಡಲಿಗಳು, ಜಿಂಕೆಯ ಕೋಡು, ಎಲುಬುಗಳು ದೊರೆತಿವೆ.[೧೭]

## ಚಿತ್ರಕಲೆ

ಡಾ. ಎಂ.ಎಸ್. ನಾಗರಾಜರಾವ್ ಮತ್ತು ಡಾ. ಕೆ.ಸಿ. ಮಲ್ಹೋತ್ರ ಇವರುಗಳು ಗುರುತಿಸಿದ ಹಾಗೇ ನವಶಿಲಾಯುಗದ ಮಾನವರ ಚಿತ್ರಕಲೆಯನ್ನು ತೆಕ್ಕಲಕೋಟೆಯ ಮೂರು ಮನೆಗಳಲ್ಲಿ ಪತ್ತೆ ಹಚ್ಚಿದ್ದಾರೆ. ಈ ಚಿತ್ರಗಳು ಮನೆಯ ಒಳ ಭಾಗದಲ್ಲಿರುವ ಪೂರ್ವಾಭಿಮುಖ ಬಂಡೆಯ ಮೇಲೆ ಕೆಂಪು ಬಣ್ಣದಲ್ಲಿ ಚಿತ್ರಿಸಲಾಗಿದೆ. ಈ ಚಿತ್ರಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಲಾಗಿದೆ.

ಮೊದಲನೇ ಗುಂಪು, ಎಡಭಾಗದಲ್ಲಿ ಚಿತ್ರಿಸಿರುವ ಚಿತ್ರದಲ್ಲಿ ಆರು ಮಾನವ ಚಿತ್ರಗಳನ್ನು ವಿಭಿನ್ನ ವಿನ್ಯಾಸದಲ್ಲಿ ಚಿತ್ರಿಸಲಾಗಿದೆ. ಅವುಗಳಲ್ಲಿ ಒಬ್ಬ ಬಹುಶಃ ಎತ್ತಿನ ಆಕಾರ ಹೋಲುವ ಒಂದು ಪ್ರಾಣಿಯ ಮೇಲೆ ಸವಾರಿ ಮಾಡುತ್ತಿದ್ದು, ಅವನ ಬಲಗೈಯಲ್ಲಿ ಬೆತ್ತವನ್ನು ಹಿಡಿದಿರುವಂತಿದೆ ಮತ್ತು ಅವನ ಹಿಂಭಾಗದಲ್ಲಿ ಮತ್ತಿಬ್ಬರು ಆ ಪ್ರಾಣಿಯನ್ನು ಪ್ರಚೋದಿಸುವಂತೆ ಚಿತ್ರಿಸಲಾಗಿದೆ. ಮೊದಲನೇ ಜೋಡಿಯು ಕೂಡ ಅವರ ಎಡ ಕೈಯಲ್ಲಿ ಬೆತ್ತವನ್ನಿಡಿದಿರುವಂತಿದೆ. ಈ ಎರಡು ಚಿತ್ರಗಳ ಮೇಲೆ ಮತ್ತೆರಡು ಚಿತ್ರಗಳಿವೆ. ಅವರ ಒಂದು ಬಾಲವನ್ನು ಗಟ್ಟಿಯಾಗಿ ಮಡಿಚಿದಂತಿರುವ ನಾಯಿಯನ್ನು ಅನುಸರಿಸುತ್ತಿರುವಂತೆ ಚಿತ್ರಿಸಿದ್ದಾರೆ. ಮತ್ತು ನಾಯಿಯನ್ನು ಸವಾರಿಮಾಡುವ ಸವಾರನ ಎದುರುಗಡೆ ಮತ್ತಿಬ್ಬರ ಚಿತ್ರಗಳಿವೆ. ಎರಡನೇ ಗುಂಪು, ಹದಿಮೂರು ವ್ಯಕ್ತಿಗಳು ನೃತ್ಯ ಮಾಡುತ್ತಿರುವ ಭಂಗಿಯಲ್ಲಿ ಕೈ ಕೈ ಹಿಡಿದು ಸಾಲಿನಲ್ಲಿ ನಿಂತಿರುವಂತೆ ಚಿತ್ರಿಸಿದ್ದಾರೆ. ಮೂರನೇ ಗುಂಪು, ಎರಡು ಪ್ರಾಣಿಗಳಾದ ನಾಯಿ ಮತ್ತು ವೃಷಭ ತಮ್ಮ ಬಾಲವನ್ನು ಗಟ್ಟಿಯಾಗಿ ಮಡಿಚಿ ಮುಖಾಮುಖಿಯಾಗಿ ನಿಂತಿರುವಂತೆ ಚಿತ್ರಿಸಲಾಗಿದೆ. ಈ ಮೇಲಿನ ಚಿತ್ರಗಳ ಜೊತೆಗೆ ಇಲ್ಲಿನ ಒಂದು ಮಣ್ಣಿನ ಮುಚ್ಚುಳದ ಮೇಲೆ ಚೂಪಾದ ಕಡ್ಡಿಯಿಂದ ಚುಚ್ಚಿ ಚುಚ್ಚಿ ಮಾಡಿದ ಜಿಂಕೆ, ಗೂಳಿ, ಸರ್ಪ, ನವಿಲು, ನಾಲ್ಕು ಪ್ರಾಣಿಗಳಿವೆ. ಚಿತ್ರ ರಚನೆಯಲ್ಲಿ ಇವರು ನಾನಾ ತಂತ್ರಗಳನ್ನು ಬಳಸುತ್ತಿದ್ದರು.[೧೮]

## ರಾಜಕೀಯ ಇತಿಹಾಸ

ಕರ್ನಾಟಕದಲ್ಲಿ ಜಿಲ್ಲಾ, ತಾಲೂಕುಗಳು, ತಮ್ಮದೇ ಆದ ಇತಿಹಾಸವನ್ನು ಹೊಂದಿದ್ದರೂ ಇವುಗಳ ಇತಿಹಾಸದ ಅಧ್ಯಯನಕ್ಕೆ ದೊರೆಯಬೇಕಾದ ಸ್ಥಾನ ದೊರಕುತ್ತಿಲ್ಲ, ಎಂಬುದು ಒಳ ಧನಿಯಾಗಿಯೇ ಉಳಿದಿದೆ. ಹಾಗೆ ನೋಡಿದರೆ, ಜಿಲ್ಲಾ, ತಾಲೂಕುಗಳ ಇತಿಹಾಸವನ್ನು ಕುರಿತು ರಚಿಸಲ್ಪಟ್ಟ ಬರವಣಿಗೆಗಳು ತೀರ ಇತ್ತೀಚಿನವು. ಅನೇಕ ತಾಲೂಕು, ಜಿಲ್ಲೆಗಳು ಚಾರಿತ್ರಿಕ ಮಹತ್ವವುಳ್ಳದ್ದು ಆಗಿದ್ದು, ಅನೇಕ ರಾಜಮನೆತನಗಳ ಉದಯ ಮತ್ತು ಏಳಿಗೆಗಳಿಗೆ ಬೇಕಾದ ಫಲವತ್ತತೆಯನ್ನು ಒದಗಿಸಿ, ರಾಜಕೀಯವಾಗಿ ಮಾತ್ರ ಸಾಗದೆ, ತನ್ನದೇ ಆದ ಭವ್ಯ ಸಂಸ್ಕೃತಿಯ ಪರಂಪರೆಯನ್ನು ನಿರ್ಮಿಸಿ, ಕರ್ನಾಟಕ ಇತಿಹಾಸವನ್ನು ಸಮೃದ್ಧಗೊಳಿಸಿದೆ. ಇತಿಹಾಸ ಪೂರ್ವ ಕಾಲವಾದ ಶಿಲಾಯುಗದ ನೆಲೆಗಳು ಹಾಗೂ ಇತಿಹಾಸ ಕಾಲವು ಮೌರ್ಯರಿಂದ ಮೊದಲ್ಗೊಂಡು ಶಾತವಾಹನ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯರು, ಹೊಯ್ಸಳ, ವಿಜಯನಗರ, ಬಿಜಾಪುರ ಹೀಗೆ ಬೃಹತ್ ರಾಜ್ಯಗಳ ಆಡಳಿತ ತೆಕ್ಕಲಕೋಟೆಯಲ್ಲಿ ಪ್ರಭಾವಬೀರಿವೆ. ಅವುಗಳ ನೆರಳಿನಲ್ಲಿ ಅನೇಕ ಸಣ್ಣ ಪುಟ್ಟ ರಾಜ್ಯಗಳು, ನಾಯಕರು, ಪಾಳೆಗಾರರು ಬೆಳೆದು ಜಿಲ್ಲೆಯ ಇತಿಹಾಸಕ್ಕೆ ಭವ್ಯತೆಯನ್ನು ಹಾಗೂ ಶ್ರೀಮಂತಿಕೆಯನ್ನು ತಂದುಕೊಟ್ಟಿವೆ.

## ಆಳ್ವಿಕೆ ಮಾಡಿದ ರಾಜ ಮನೆತನಗಳು

### ಮೌರ್ಯರು:-

ಕ್ರಿ.ಪೂ. ೩೨೨ ರಲ್ಲಿ ನಂದರನ್ನು ಸೋಲಿಸಿದವರು ಮೌರ್ಯರು ತೆಕ್ಕಲಕೋಟೆಯ ರಾಜಕೀಯ ಇತಿಹಾಸ ಪ್ರಾರಂಭವಾಗುವುದು ಮೌರ್ಯರ ಕಾಲದಿಂದ. ಇವರ ಬಗ್ಗೆ ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲ್ಲೂಕಿನ ನಿಟ್ಟೂರು ಮತ್ತು ಉಡೆಗೋಳ (ಉದಯಗೊಳ್ಳಂ) ಎಂಬ ಎರಡು ಪುಟ್ಟ ಗ್ರಾಮಗಳಲ್ಲಿ ದೊರೆತಿರುವ ಶಾಸನಗಳೇ ಸಾಕ್ಷಿ. ಈ ಗ್ರಾಮಗಳು ಭೌಗೋಳಿಕವಾಗಿ ಬೆಟ್ಟಗುಡ್ಡಗಳಿಂದ ಆವೃತವಾಗಿವೆ. ಈ ಗ್ರಾಮಗಳ ಪೂರ್ವಕ್ಕೆ ಸುಕ್ರದಪ್ಪ ಬೆಟ್ಟ, ಚಿಕುಡಪ್ಪ ಗುಡ್ಡ ಮತ್ತು ಎರಮಟ್ಟಿ ಗುಡ್ಡ, ಪಶ್ಚಿಮದಲ್ಲಿ ತುಂಗಭದ್ರಾ ನದಿ ಉತ್ತರ ದಕ್ಷಿಣದಲ್ಲಿ ಗ್ರಾನೈಟ್ ಬೆಟ್ಟಗಳ ಸಾಲುಗಳಿವೆ. ೧೯೭೭-೭೮ ಬಳ್ಳಾರಿ ಜಿಲ್ಲೆಯ ಇತಿಹಾಸ ಸಂಶೋಧನೆಯಲ್ಲಿ ಒಂದು ಮಹತ್ವದ ವರ್ಷ. ಕರ್ನಾಟಕದಲ್ಲಿ ಶಾಸನಗಳ ಶೋಧನೆಯನ್ನು ನಡೆಸುತ್ತಿದ್ದ, ಇತಿಹಾಸ ಸಂಶೋಧಕರಾದ ಡಾ. ಶ್ರೀನಾಥ ಅವರು ಮೌರ್ಯಸಾಮ್ರಾಜ್ಯದ ಚಕ್ರವರ್ತಿ ಅಶೋಕ ಮೌರ್ಯ (ಸು.ಕ್ರಿ.ಪೂ. ೨೭೩-೨೩೨) ರ ಶಾಸನವು ನಿಟ್ಟೂರಿನ ಚಿಕುಡಪ್ಪ ಗುಡ್ಡದ ಎರಡು ಕಲ್ಲು ಬಂಡೆಯ ಮೇಲೆ ಕೊರೆದಿದ್ದನ್ನು ಗುರ್ತಿಸಿದರು. ನಂತರ ೧೯೭೮ ರಲ್ಲಿ ನಿಟ್ಟೂರಿನ ಸಮೀಪದಲ್ಲಿರುವ ಉಡೇಗೋಳ (ಉದಯ ಗೊಳ್ಳಂ) ಎಂಬ ಗ್ರಾಮದ ಆಗ್ನೇಯ ದಿಕ್ಕಿನಲ್ಲಿರುವ ಎರಮಟ್ಟಿ ಗುಡ್ಡದ ಬಂಡೆಗಳ ಮೇಲೆ ಮತ್ತೆರೆಡು ಶಾಸನಗಳನ್ನು ಗುರ್ತಿಸಿದರು.

### ನಿಟ್ಟೂರು ಶಾಸನಗಳು:-

ಈ ಶಾಸನಗಳು ಬ್ರಾಹ್ಮಿ ಲಿಪಿಯಲ್ಲಿವೆ. ಭಾಷೆ ಪ್ರಾಕೃತ. ನಿಟ್ಟೂರಿನ ಚಿಕುಡಪ್ಪ ಗುಡ್ಡದ ಎರಡು ಕಲ್ಲು ಬಂಡೆಗಳ ಮೇಲೆ ಈ ಶಾಸನಗಳಿವೆ. ಮೊದಲ ಕಲ್ಲು ಬಂಡೆಯ ಮೇಲೆ ೦೭ಸಾಲು, ಎರಡನೇ ಬಂಡೆಯ ಮೇಲೆ ೦೫ ಸಾಲುಗಳಿವೆ. ಇವು ಒಟ್ಟು ೧೨ ಸಾಲುಗಳಿಂದ ಕೂಡಿವೆ. ಕಲ್ಲು ಬಂಡೆಯಲ್ಲಿ ನೆಲದಿಂದ ಒಂದು ಕಾಲು ಮೀಟರ್ ಮೇಲೆ ಬರೆಯಲಾಗಿದ್ದು, ಪಶ್ಚಿಮಾಭಿಮುಖವಾಗಿವೆ. ಈ ಶಾಸನವು ಮೌರ್ಯ ಸಾಮ್ರಜ್ಯದ ದಕ್ಷಿಣ ಭಾಗದಲ್ಲಿಯ ಸುವರ್ಣಗಿರಿ ಪ್ರಾಂತ್ಯದ ಮಂತ್ರಿಗಳಾಗಿದ್ದ ಧರ್ಮ ಮಹಾಮಾತ್ರರ ಮೂಲಕ ಅಶೋಕ ಚಕ್ರವರ್ತಿಯು ಸಾಮ್ರಾಜ್ಯದ ಗಡಿ ಭಾಗದ ಜನರ ಕ್ಷೇಮವನ್ನು ಬಯಸಿ ಅವರಿಗೆ ಅಜ್ಞಾಪಿಸಿದ ವಿಷಯ ಇದರಲ್ಲಿದೆ.

### ಉಡೇಗೋಳ (ಉದಯಗೊಳ್ಳಂ) ಶಾಸನಗಳು :-

ಉಡೇಗೋಳ ಗ್ರಾಮದ ಆಗ್ನೇಯ ದಿಕ್ಕಿನಲ್ಲಿರುವ ಎರಮಟ್ಟಿ ಗುಡ್ಡದ ಬಂಡೆಗಳ ಮೇಲೆ ಅಶೋಕನ ಶಾಸನಗಳನ್ನು ಗುರ್ತಿಸಲಾಗಿದೆ. ಇದನ್ನು ಡಾ. ಶ್ರೀನಾಥ ಎಂಬುವವರು ೧೯೭೮ ರಲ್ಲಿ ಪತ್ತೆಹಚ್ಚಿದರು. ಮೊದಲ ಕಲ್ಲು ಬಂಡೆಯ ಮೇಲೆ ೦೭ ಸಾಲು, ಎರಡನೇ ಬಂಡೆಯ ಮೇಲೆ ೦೬ ಸಾಲುಗಳಿವೆ, ಇವು ಒಟ್ಟು ೧೩ ಸಾಲುಗಳಿದ್ದು, ಪೂರ್ವಾಭಿಮುಖವಾಗಿವೆ. ಈಗ ಇಲ್ಲಿನ ಬರವಣಿಗೆಗಳು ಬಹುತೇಕ ಹಾಳಾಗಿವೆ. ಈ ಶಾಸನಗಳ ಸಾರಾಂಶವು ನಿಟ್ಟೂರಿನ ಶಾಸನಗಳ ಸಾರಾಂಶವನ್ನೆ ಹೋಲುತ್ತದೆಯಾದರು ಸ್ವಲ್ಪ ಮಟ್ಟಿನ ಭಿನ್ನತೆಯನ್ನು ಕಾಣಬಹುದು.

ಇದರ ಸಾರಾಂಶವು **ದೇವನಾಂ ಪ್ರಿಯಾದರ್ಶಿ ಮತ್ತು ರಾಜಾ ಅಸೋಕೊ (ಅಶೋಕ)** ಎಂದು ಪ್ರಾರಂಭವಾಗಿ, ರಾಜನಾದ ಅಶೋಕನು ತನ್ನ ನಾಗರಿಕರಿಗೆ ಆಜ್ಞಾಪಿಸುತ್ತಾ, ಪ್ರತಿಯೊಬ್ಬರು ತಮ್ಮ ತಂದೆ ತಾಯಿಗಳಿಗೆ ವಿಧೇಯಕರಾಗಿರಬೇಕು: ಅದೇ ರೀತಿ ಪ್ರತಿಯೊಬ್ಬನು ಹಿರಿಯರಿಗೆ ಗೌರವ ತೋರಿಸತಕ್ಕದ್ದು ಆಚಾರ್ಯರನ್ನು ಗೌರವಿಸಬೇಕು, ಪ್ರತಿಯೊಬ್ಬ ಪ್ರಜೆಯು ಧರ್ಮವನ್ನು ರೂಢಿಸಿಕೊಳ್ಳಬೇಕು. ಪ್ರತಿಯೊಬ್ಬರು ಹೀಗೆ ನಡೆದುಕೊಳ್ಳವುದರಿಂದ ದೀರ್ಘಾಯುಸ್ಸು ಸಿದ್ಧಿಸುತ್ತದೆ ಎನ್ನುತ್ತಾನೆ.

ಅಶೋಕನ ಶಾಸನಗಳು ನಿಟ್ಟೂರು ಮತ್ತು ಉಡೆಗೋಳದಲ್ಲಿ ಇರುವುದರಿಂದ ಈ ಭಾಗವು ಆ ಚಕ್ರವರ್ತಿಯ ಕಾಲದಲ್ಲಿ ಮೌರ್ಯ ಸಾಮ್ರಾಜ್ಯದಲ್ಲಿತ್ತೆಂದು ನಿಸ್ಸಂದೇಹವಾಗಿ ಹೇಳಬಹುದು. ಕರ್ನಾಟಕದ ಅನೇಕ ಕಡೆ ಮೌರ್ಯ ಸಾಮ್ರಾಜ್ಯದ ಪ್ರಮುಖ ಅರಸನಾದ ಅಶೋಕನ ಶಾಸನಗಳು ದೊರಕಿರುವ ಶಾಸನಗಳಲ್ಲಿ ಅಶೋಕನ ಹೆಸರನ್ನು ಹೆಸರಿಸುವ ಮಸ್ಕಿ ಶಾಸನ ಬಿಟ್ಟರೆ ನಿಟ್ಟೂರು ಮತ್ತು ಉಡೆಗೋಳಂ ಶಾಸನಗಳಲ್ಲಿ, **ದೇವನಾಂ ಪ್ರಿಯಾದರ್ಶಿ ಮತ್ತು ರಾಜಾ ಅಶೋಕೊ** ಎಂದು ಕಂಡು ಬರುವುದು. ಈ ತಾಲ್ಲೂಕಿನ ಶಾಸನಗಳ ವೈಶಿಷ್ಟವಾಗಿದೆ.[೧೯]

**೨) ಶಾತವಾಹನರು :-**

ಮೌರ್ಯರ ನಂತರ ಶಾತವಾಹನರು ಹೊರಡಿಸಿದ ಕೆಲವು ಶಾಸನಗಳು ಈ ಜಿಲ್ಲೆಯಲ್ಲಿ ದೊರಕಿದರೂ, ಈ ಪ್ರದೇಶವನ್ನು ಅಧಿಕೃತವಾಗಿ ಆಳಿದ ಬಗ್ಗೆ ಖಚಿತ ವಿವರಗಳಿಲ್ಲ. ಆದರೂ ಪಲ್ಲವರಿಗೆ ಸಂಬಂಧಿಸಿದ ಹಿರೇ ಹಡಗಲಿಯ ಪ್ರಾಕೃತ ಶಾಸನದಲ್ಲಿ, **ಶಾತವಾಹನೀರಠ್ಠ** ಎಂಬ ಉಲ್ಲೇಖವಿದೆ. ಶಾತವಾಹನೀ ರಾಷ್ಟ್ರದ 'ಚಿಲ್ಲರೇಕಕೋಡುಂಕೇ' ಎಂಬ ಗ್ರಾಮವನ್ನು ಪಲ್ಲವ ರಾಜನು ದತ್ತಿಯಾಗಿ ನೀಡಿರುವಂತೆ ಹೇಳಿರುವುದರಿಂದ ಪಲ್ಲವರ ಕಾಲಕ್ಕೆ ಈ ಪ್ರದೇಶವು ಅವರ ಸಾಮ್ರಾಜ್ಯಕ್ಕೆ ಸೇರಿದ್ದರೂ ಪಲ್ಲವರು ತಮ್ಮ ಸಾಮ್ರಾಜ್ಯದ ಭಾಗಗಳನ್ನು ಗುರ್ತಿಸುವಾಗ ಈ ಭಾಗವನ್ನು, **ಶಾತವಾಹನಿರಠ್ಠ** ಎಂಬ ಹೆಸರಿನನಿಂದಲೇ ಕರೆಯುತ್ತಾರೆ.

**೩) ಬಾದಾಮಿ ಚಾಲುಕ್ಯರು :-**

ಬಾದಾಮಿ ಚಾಲುಕ್ಯರು ಈ ಪ್ರದೇಶದಲ್ಲಿ ಆಡಳಿತ ನಡೆಸಿದ ಬಗ್ಗೆ ಬಳ್ಳಾರಿ ತಾಲ್ಲೂಕಿನ ಕುರುಗೋಡು ಶಾಸನದಲ್ಲಿ ಸತ್ಯಾಶ್ರಯನ ಉಲ್ಲೇಖವಿರುವ ಶಾಸನವಿದೆ. ಅದೇ ರೀತಿ ಸಂಡೂರಿನ ಕುಮಾರಸ್ವಾಮಿ ದೇವಾಲಯದಲ್ಲಿರುವ ಶಾಸನವು ಇವರ ಆಳ್ವಿಕೆಯ ಬಗ್ಗೆ ಸ್ಪಷ್ಟಪಡಿಸುತ್ತದೆ.

**೪) ರಾಷ್ಟ್ರಕೂಟರು :-**

ಕನ್ನಡಿಗರ ಕೀರ್ತಿಪತಾಕೆಯನ್ನು ನಾಡಿನಾದ್ಯಂತ ಪಸರಿಸಿದ ರಾಷ್ಟ್ರಕೂಟರು ಪ್ರಾಚೀನ ಮತ್ತು ಮಧ್ಯಕಾಲೀನ ಭಾರತದ ಇತಿಹಾಸದಲ್ಲಿ ಚಿರಸ್ಮರಣೀಯರಾಗಿದ್ದಾರೆ. ಬಲ್ಲಕುಂದೆ ನಾಡಿನಲ್ಲಿ ದೊರೆತ ಇವರ ಮೊದಲ ದಾಖಲೆ ಮೂರನೇ ಕೃಷ್ಣನ ಕ್ರಿ.ಶ. ೯೪೭ ರ ಕುಡುತಿನಿ ಶಾಸನವಾಗಿದೆ, ಅವನು **ಚಲಕೆನಲ್ಲಾತ** ಎಂಬ ಬಿರುದನ್ನು ಧರಿಸಿದ್ದನು. ಕ್ರಿ.ಶ. ೯೫೭ ರ ಬಲ್ಲಕುಂದೆ ಗ್ರಾಮದ ಶಾಸನದಲ್ಲಿ ಅಕಾಳವರ್ಷ (ಮೂರನೇ ಕೃಷ್ಣ) ನ ಪ್ರಧಾನನಾದ ಗಜಜೀವಿವಂಶದ ಶತೃಘ್ನನು ಬಲ್ಲಕುಂದೆ

ವಿಷಯವನ್ನು ಆಳುತ್ತಿದ್ದರ ಬಗ್ಗೆ ಉಲ್ಲೇಖಿಸಲಾಗಿದೆ. ಕೊಳಗಲ್ಲಿನ ಶಾಸನದಲ್ಲಿಯೂ ಅವನ ಉಲ್ಲೇಖವಿದೆ. ಕುಡುತಿನಿ ಶಾಸನದಲ್ಲಿಯೂ ಖೊಟ್ಟಿಗನ ಉಲ್ಲೇಖವಿದೆ. ಆದರೆ ಮುಂದಿನ ಎರಡು ವರ್ಷಗಳಲ್ಲಿ ರಾಷ್ಟ್ರಕೂಟರ ಆಳ್ವಿಕೆ ಕೊನೆಗೊಂಡು ಕಲ್ಯಾಣದ ಚಾಲುಕ್ಯರು ರಾಜ್ಯಭಾರ ಮಾಡತೊಗಿದರು.[೨೦]

**೫) ಕಲ್ಯಾಣ ಚಾಲುಕ್ಯರು :-**

ರಾಷ್ಟ್ರಕೂಟರ ಉತ್ತರಾಧಿಕಾರಿಯಾಗಿ ಬಂದ ಕಲ್ಯಾಣ ಚಾಲುಕ್ಯರು ವಿಸ್ತೃತ ಆಳ್ವಿಕೆಯಿಂದ ಈ ಭಾಗದ ಇತಿಹಾಸ ಹೆಚ್ಚು ನಿಚ್ಚಳವಾಗಿ ಕಾಣುತ್ತದೆ. ಇಮ್ಮಡಿ ತೈಲಪನು ಚಾಲುಕ್ಯರ ರಾಜ್ಯ ಸತ್ತೆಯನ್ನು ಪುನಃ ಸ್ಥಾಪಿಸುವುದಕ್ಕಿಂತ ಮುಂಚೆ ಅವನು ರಾಷ್ಟ್ರಕೂಟರ ಸಾಮಂತನಾಗಿದ್ದನು. ಈ ಅವಧಿಯಲ್ಲಿ ಮಹಾ ಸಾಮಂತಾಧಿಪತಿಯಾಗಿದ್ದ, ಅವನು ಮುಂದೆ ಕೆಲ ವರ್ಷಗಳಲ್ಲೇ ರಾಷ್ಟ್ರಕೂಟರನ್ನು ಸದೆಬಡಿದು ಚಕ್ರವರ್ತಿಯಾದನು.

ತೈಲಪ ಚಕ್ರವರ್ತಿಯ ಎರಡು ಶಾಸನಗಳು ೫ನೇ ವಿಕ್ರಮಾದಿತ್ಯನ ಒಂದು ಶಾಸನ ಬಲ್ಲಕುಂದೆ ನಾಡಿನಲ್ಲಿ ದೊರೆತಿವೆ. ಆದರೆ ಅವರ ಆಡಳಿತಕ್ಕೆ ಸಂಬಂಧಿಸಿದ ಮಾಹಿತಿಗಳನ್ನು ಅವು ನೀಡುವುದಿಲ್ಲ. ಕಲ್ಯಾಣ ಚಾಲುಕ್ಯರ ಸಾಮ್ರಾಜ್ಯಕ್ಕೆ ಉಜ್ವಲ ಬುನಾದಿಯನ್ನು ಹಾಕುವಲ್ಲಿ ಜಗದೇಕಮಲ್ಲ ಜಯಸಿಂಹನ ಹಿರಿಯಮಗ ಮೊದಲನೇ ಸೊಮೇಶ್ವರ ಯಶಸ್ವಿಯಾದ. ಇವನು ತ್ರೈಲೋಕ್ಯಮಲ್ಲ, ಆಹವಮಲ್ಲ, ಮತ್ತು ಜಗದೇಕಮಲ್ಲ ಮೊದಲಾದ ಬಿರುದುಗಳಿಂದ ಪ್ರಖ್ಯಾತನಾಗಿದ್ದಾನೆ. ಈತನ ಆರು ಶಾಸನಗಳು ಬಲ್ಲಕುಂದೆ ನಾಡಿನಲ್ಲಿ ದೊರೆತಿವೆ. ಸಿರಿವರ ಶಾಸನವು ಈತನ ಸಾಮಂತ ನನ್ನಿ ನೊಳಂಬಾದಿ ರಾಜರಾಗಿ ಪಟ್ಟಾಭಿಷೇಕವಾದುದನ್ನು ಹೇಳಿದೆ. ಹಾವಿನಾಹಾಳು ಶಾಸನವು ಅವನು ನಾಡನ್ನು (ನೊಳಂಬವಾಡಿ) ಆಳುತ್ತಿದ್ದುದ್ದನ್ನು ಹೇಳುತ್ತದೆ.

ಬಲ್ಲಕುಂದೆ ಶಾಸನವು ಅವನು ನೊಳಂಬವಾಡಿ-೩೨೦೦೦, ಕದಂಬಗಳಿಗೆ-೧೦೦೦ ಕೋಗಳಿ-೫೦೦, ಬಲ್ಲಕುಂದೆ-೩೦೦, ಕುಡಿಹರಲ-೭೦, ಕರವಿಡಿ-೩೦ ಗಳನ್ನು ಆಳುತ್ತಿದ್ದನು ಎಂದು ಉಲ್ಲೇಖಿಸುತ್ತದೆ. ಕೋಳೂರು ಶಾಸನವು 'ಆತನ ಭುಜಬಲಮೀ ಜಗತೀತದೊಳಗೆಣೆಪೊಡಂ ತದುಪಮಾತೀತಂ ಭೂತಳದರ ಸುಗಳಿಂ ಧವಳಾತಪಮಂ ತನಗೆ ಪೀಡಿಸಿ ರಾಜ್ಯಂಗೆಯ್ದಂ ಜಗದೊಳಗೆ ಪೆರಭ್ರೂಭುಜರೂಗೆದು ದ್ದಂಡದೊಳೆ ನೆಗಳೆ ಕೊಂದವರಂಧಾತ್ರಿಗೆಯೊರ್ಬ್ಬನೆ ಪತಿಯಾದೊಡೆ ಜಗದೇಕನೃಪಾಳನಾಮಮಾಯ್ತನ್ವರ್ತ್ಥಂ'. ಎಂದು ಎರಡನೇ ಜಗದೇಕಮಲ್ಲನ ಕುರಿತು ಹೊಗಳುವುದರ ಮೂಲಕ ಅವನ ಶೌರ್ಯವನ್ನು ಪುಷ್ಟೀಕರಿಸಿದೆ.

ವರವಿನ ಮಲ್ಲೇಶ್ವರ ದೇವಾಲಯವೂ ಶೈವ ದೇವಾಲಯವಾಗಿದ್ದು, ಕಲ್ಯಾಣ ಚಾಲುಕ್ಯರ ಕಾಲದ ಪ್ರಸಿದ್ಧ ದೇವಾಲಯಗಳಲ್ಲಿ ಇದು ಒಂದಾಗಿದೆ. ಈ ದೇವಾಲಯವೂ ದ್ರಾವಿಡ ಮತ್ತು ವೇಸರ ಶೈಲಿಯ ಕಟ್ಟಡಗಳನ್ನು ಒಳಗೊಂಡಿದ್ದು, ಗುಡ್ಡದ ಮೇಲೆ ನಿರ್ಮಾಣ ಮಾಡಲಾಗಿದೆ. ಪೂರ್ವಕ್ಕೆ ಮುಖ ಮಾಡಿರುವ ಈ ಒಂದು ದೇವಾಲಯವೂ ಚಾಲುಕ್ಯರ ಕಾಲದ ದೇವಾಲಯಗಳಲ್ಲಿ ವಿಶಿಷ್ಟವಾಗಿದೆ.

## ೬) ಕಲ್ಯಾಣದ ಕಲಚುರಿಗಳು:-

ಕಲಚೂರಿಯ ಎರಡನೇ ಬಿಜ್ಜಳನು 'ಚಕ್ರವರ್ತಿ' ಎಂದು ಘೋಷಿಸಿಕೊಂಡಮೇಲೆ ತುಂಗಭದ್ರಾ ನದಿಯು ಹೊಯ್ಸಳ ಮತ್ತು ಕಲಚುರಿಗಳ ಮೇರೆಯಾಗಿ ಚಾಲುಕ್ಯರ ಸಾಮ್ರಾಜ್ಯವು ಹಂಚಿಹೋಯಿತು. ತೆಕ್ಕಲಕೋಟೆಯ ಬಸವೇಶ್ವರ ಗುಡಿಯಲ್ಲಿನ ಶಾಸನವು ಬಿಜ್ಜಳನ ಸಾಮಂತ ಅರಸನಾದ ರಾಚಮಲ್ಲನ ಅಧಿಕಾರಿ ಕೇತಯಸಾಹಣಿಯು ಮೂರು ದೇವಾಲಯಗಳು ನಿರ್ಮಿಸಿದ ಬಗ್ಗೆ ತಿಳಿಸುತ್ತದೆ. ಬಿಜ್ಜಳನು ಪ್ರಚಂಡ ಬಿರುಗಾಳಿಯಂತೆ ಬಂದನಾದರೂ ಬಹಳ ಕಾಲ ರಾಜ್ಯಭಾರ ತೂಗಿಸಿಕೊಂಡು ಹೋಗಲಿಲ್ಲ. ಕೇವಲ ೨೩ ವರ್ಷಗಳಲ್ಲಿ ೬ ಜನ ಕಲಚೂರಿ ಸಂತತಿಯವರು ಆಳುವುದರೊಂದಿಗೆ ಮನೆತನವು ಕೊನೆಗೊಂಡಿತು. ಈ ಸಂದರ್ಭವನ್ನು ಸರಿಯಾಗಿ ಉಪಯೋಗಿಸಿಕೊಳ್ಳಲು ಭೂಗತನಾಗಿದ್ದ ತ್ರಿಭುವನಮಲ್ಲ ಸೋಮೆಶ್ವರನು ಹೊರಬಂದನು ಕುರುಗೋಡು ಶಾಸನವು ಚಾಲುಕ್ಯ ವಂಶೋತ್ಪಳ ವಿಕಸನ ಚಂದ್ರನೆನಿಸಿದ ಸೋಮೆಶ್ವರನು ಕಲ್ಯಾಣದ ನೆಲೆವೀಡಿನಿಂದ ಆಳುತ್ತಿದ್ದುದನ್ನು ಸ್ಪಷ್ಟಪಡಿಸುತ್ತದೆ.

## ೭) ನೊಳಂಬ ಪಲ್ಲವರು:-

ನೊಳಂಬರು ರಾಜವಂಶಿಯ ಮಹಾಮಂಡಳೇಶ್ವರರು ಅವರು ಹಿಂದೆ ಚಕ್ರವರ್ತಿಗಳಾಗಿದ್ದ ಪಲ್ಲವ ಶಾಖೆಯವರು. ಪಲ್ಲವರ ಮೂಲ ಪುರುಷ ಕಂಚಿಯ ಪಲ್ಲವರಾಜ ತ್ರಿನಯನ. ಅವನು ಕ್ರಿ.ಶ. ನಾಲ್ಕನೇ ಶತಮಾನದಲ್ಲಿ ಚಾಲುಕ್ಯ ವಿಜಯಾದಿತ್ಯ ಅಥವಾ ಜಯಸಿಂಹನಿಂದ ಸೋಲಿಸಲ್ಪಟ್ಟರೂ ಮುಂದೊಮ್ಮೆ ಅವನನ್ನು ಸೋಲಿಸಿದನು. ಈ ತ್ರಿನಯನನು ಪಲ್ಲವರ ಮತ್ತೊಂದು ಶಾಖೆಯನ್ನು ಪ್ರಾರಂಭಿಸಿದ ಸಿಂಹವಿಷ್ಣುವೇ ಈಶ್ವರ ವಂಶದರೆಂದು ಕರೆಯಲಾಗಿದೆ.

ನೊಳಂಬರು ಕ್ರಿ.ಶ. ೮ನೇ ಶತಮಾನದಲ್ಲಿ ಇಂದಿನ ಆಂಧ್ರ ಪ್ರದೇಶದ ಮಡಕಶಿರ ತಾಲೂಕಿನ ಹೇಂಜರು ಅಥವಾ ಹೇಮಾವತಿ ರಾಜಧಾನಿಯಿಂದ ಆಳುತ್ತಿದ್ದರು. ಮುಂದೆ ಕ್ರಿ.ಶ. ೧೧ನೇ ಶತಮಾನದಲ್ಲಿ ಇವರ ಆಡಳಿತ ಬಳ್ಳಾರಿ ಜಿಲ್ಲೆಯ ಕಂಪಿಲಿಗೆ ಸ್ಥಳಾಂತರ ಗೊಂಡಿತು. ಆರಂಭದಲ್ಲಿ ನೊಳಂಬರು ನೊಳಂಬಳಿ-೧೦೦೦ ಎಂಬ ಚಿಕ್ಕ ಪ್ರಾಂತ್ಯವನ್ನು ಆಳುತ್ತಿದ್ದರು. ಮುಂದೆ ಕ್ರಿ.ಶ. ೯-೧೦ನೇ ಶತಮಾನದಲ್ಲಿ ಅವರ ಪ್ರಾಬಲ್ಯ ಹೆಚ್ಚಿ ನೊಳಂಬವಾಡಿ-೩೨೦೦೦ ಎಂಬ ವಿಶಾಲ ಪ್ರಾಂತ್ಯದ ಅಧಿಪತಿಗಳಾದರು. ಇವರು ಗಂಗರಿಂದ ಪಾಲ್ಗೊಂಡು ಕಲ್ಯಾಣದ ಚಾಲುಕ್ಯರವರೆಗೆ ಅವರು ಸಾಮಂತರಾಗಿಯೇ ಆಳಿದ್ದಾರೆ. ಶಾಸನಗಳು ಅವರನ್ನು 'ಕಾಂಚಿಪುರವರೇಶ್ವರ', 'ಪಲ್ಲವಕುಲತಿಲಕ', 'ಪಲ್ಲವಾನ್ವಯ', ಮುಂತಾದ ಪ್ರಶಸ್ತಿಗಳೊಂದಿಗೆ ಉಲ್ಲೇಖಿಸುತ್ತವೆ.

ಉದಾಹರಣೆ ಕ್ರಿ.ಶ. ೯೮೧ ರ ಕಂಚುಗಾರ ಬೆಳಗಲ್ಲು ಶಾಸನದಲ್ಲಿ ಈ ವಂಶದ ವೀರನೋಳಂಬ ಪಲ್ಲವ ಪೆರ್ಮಾನಾಡಿಯ ಕುರಿತು ಪಲ್ಲವಾನ್ವಯ ಶ್ರೀ ಪೃಥ್ವೀವಲ್ಲಭ ಪಲ್ಲವ ಕುಳತಿಳಕನೇಕವ್ಯಾಕ್ಯಂ ಕಾಂಚಿಪುರವರೇಶ್ವರಂ ಶ್ರೀ ಮನ್ವೀರನೊಳಂಬಪಲ್ಲವ ಪೆರ್ಮಾಡಿದೇವರು ಎಂಬ ಉಲ್ಲೇಖವಿದೆ. ಪಲ್ಲವರು ಅನೇಕ ಅರಸು ಮನೆತನಗಳೊಂದಿಗೆ ಸಂಬಂಧವನ್ನು ಬೆಳೆಸುವ ಮೂಲಕ ಮಹಾಮಂಡಳೇಶ್ವರ ಪದವಿಯನ್ನು ಹೊಂದಿದ್ದರು.

**ಮಹಾಮಂಡಳೇಶ್ವರರು**

**ಬ್ರಹ್ಮಾದಿರಾಯ:-**

ತೆಕ್ಕಲಕೋಟಯ ಕ್ರಿ.ಶ. ೧೦೨೦ ರ ಶಾಸಸ ಪಾಪೆಕಲ್ಲನ್ನು ಆಳುತ್ತಿದ್ದ ಬ್ರಹ್ಮಾದಿರಾಜನು ಊರೊಡೆಯರಿಗೆ ವ್ಯವಸಾಯದ ಮೇಲಿನ ಕೆಲವು ತೆರಿಗೆಗಳನ್ನು ಬಿಟ್ಟಿದ್ದನ್ನು ತಿಳಿಸುತ್ತದೆ. ಈ ಬ್ರಹ್ಮಾದಿರಾಯನು ಬಹುಶಃ ಕೋಲಾರ ಪ್ರದೇಶವನ್ನು ಆಳುತ್ತಿದ್ದ ಬ್ರಹ್ಮಾದಿರಾಯರ ವಂಶಕ್ಕೆ ಸೇರಿದ ಅರಸನಿರಬೇಕು. ಇರಿಯನೊಳಂಬ ಘಟೆಯಂಕಕಾರನ ಹೆಸರಿನೊಂದಿಗೆ ತನ್ನನ್ನು ಗುರುತಿಸಿ ಕೊಂಡಿರುವುದರಿಂದ ಈತ ಅವನ ಸಾಮಂತನಾಗಿ ಈ ಪ್ರದೇಶವನ್ನು ಆಳುತ್ತಿದ್ದಿರಬಹುದು. ಇದೇ ಶಾಸನದಲ್ಲಿ ಇವನನ್ನು ಘಟೆಗನ 'ಗಂಧಾವರಣ' ವೆಂದೂ ಕರೆದಿದೆ. ಹೀಗಾಗಿ ಬ್ರಹ್ಮಾದಿರಾಯನ ವಂಶದವರು ನೊಳಂಬರೊಂದಿಗೆ ಕಂಪಿಲಿಯ ಕಡೆಗೆ ಹೋಗಿರಬಹುದು. ಇವನ ಬಗ್ಗೆ ದೊರೆಯುವ ಏಕಮಾತ್ರ ಉದಾಹರಣೆ ಇದು. ಶಾಸನದಲ್ಲಿ ಇವನನ್ನು ಮಹಾಸೇನಾಪತಿ ಎಂದು ಕರೆದಿದೆ. ಈ ಶಾಸನದಲ್ಲಿ ತೆಕ್ಕಲಕೋಟೆಯನ್ನು 'ಪಾಪೆಕಲ್ಲು' ಎಂದು ಕರೆದಿದೆ. ನಂತರ ಕ್ರಿ.ಶ. ೧೦೫೪ ರ ಹಿರೇಮ್ಯಾಗಳಗೇರಿ ಶಾಸನದಲ್ಲಿ ಜಗದೇಕಮಲ್ಲ ನೊಳಂಬ ಬ್ರಹ್ಮಾದಿರಾಜನ ಉಲ್ಲೇಖವಿದೆ.[೨೧]

**೮) ವಿಜಯನಗರ ಅರಸರ ಕಾಲ :-**

ವಿಜಯನಗರ ಸಾಮ್ರಾಜ್ಯವು ಕ್ರಿ.ಶ. ೧೩೩೬ ರಲ್ಲಿ ಸ್ಥಾಪಿತವಾಯಿತು. ಹರಿಹರ ಮತ್ತು ಬುಕ್ಕರಾಯ ಈ ವಿಜಯನಗರ ಸಾಮ್ರಾಜ್ಯದ ಸ್ಥಾಪಕರಾಗಿದ್ದು ವಿದ್ಯಾರಣ್ಯರು ಇವರಿಗೆ ಸಹಾಯ ಮಾಡಿದರು. ಈ ಸಾಮ್ರಾಜ್ಯವನ್ನು ಸಂಗಮ, ಸಾಳ್ವ, ತುಳುವ ಮತ್ತು ಅರವೀಡು ಎಂಬ ನಾಲ್ಕು ಸಂತತಿಗಳು ಆಳ್ವಿಕೆ ಮಾಡಿದವು. ವಿಜಯನಗರ ಸಾಮ್ರಾಜ್ಯದಲ್ಲಿ ಶ್ರಿ ಕೃಷ್ಣದೇವರಾಯ ಪ್ರಸಿದ್ಧ ಅರಸನಾಗಿದ್ದನು.

ವಿಜಯನಗರದ ಪ್ರಮುಖ ಅರಸನಾದ ಶ್ರೀ ಕೃಷ್ಣದೇವರಾಯನ ಶಾಸನವು ಸಿರುಗುಪ್ಪ ತಾಲ್ಲೂಕಿನ ತೆಕ್ಕಲಕೋಟೆಯ ನೆಲ ಅಮರೇಶ್ವರ ದೇವಸ್ಥಾನದಲ್ಲಿ ದೊರೆತಿದೆ. ಈ ಶಾಸನವು ಕ್ರಿ.ಶ. ೧೫೧೧ ರಲ್ಲಿ ಹೊರಡಿಸಲಾಗಿದ್ದು, ಇದು ಶ್ರೀ ಕೃಷ್ಣದೇವರಾಯನಿಗೆ ಧರ್ಮವಾಗಬೇಕೆಂದು ತೆಕ್ಕಲಕೋಟೆಗೆ ಸಂಬಂಧಿಸಿದ ಗ್ರಾಮಗಳ ಶುಲ್ಕವನ್ನು ಮನ್ನ ಮಾಡಿದ ಉಲ್ಲೇಖವಿದೆ. ಈ ಶಾಸನದಲ್ಲಿ ತೆಕ್ಕಲಕೋಟೆಯನ್ನು 'ಹೆಕಲುಕೋಟೆ' ಎಂದು ಕರೆಯಲಾಗಿದ್ದು, ಈ ಹೆಕಲುಕೋಟೆಯು ಹಸ್ತಿನಾವತಿಯ ವೇಂಟಿಗೆ ಸೇರಿತ್ತೆಂದು ತಿಳಿಸಲಾಗಿದೆ. ಅಲ್ಲದೇ ಶಾಪಾಶಯದಲ್ಲಿ ಧರ್ಮಕ್ಕೆ ತಪ್ಪಿದವನು 'ಮನೋಭಿಮಾನವಿಲ್ಲದವನು' ಎಂಬ ಅಪರೂಪದ ಮಾತು ಇರುವುದು ಈ ಶಾಸನದಲ್ಲಿ ಬರುತ್ತದೆ.

ತೆಕ್ಕಲಕೋಟೆಯ ಕ್ರಿ.ಶ. ೧೫೩೯ ರ ಮಲ್ಲಯ್ಯಗುಡ್ಡದ ಶಾಸನ (ತೇರಿನ ಮನೆ ಎದುರಿಗೆ ನಿಲ್ಲಿಸಲಾಗಿದೆ) ಅಚ್ಯುತರಾಯನಿಗೆ ಪುಣ್ಯವಾಗಬೇಕೆಂದು 'ಪಯಜರ್ರೈಯನು' ಅಂದಿನ ದೇವರ ನೈವೇದ್ಯಕ್ಕೆ ಇಂದಿನ ದಾನವನ್ನು ಪುನರ್ದತ್ತಿಯಾಗಿ ನೀಡಿದ ಉಲ್ಲೇಖವಿದೆ. ಈ ಶಾನಸದಲ್ಲಿ ತೆಕ್ಕಲಕೋಟೆಯನ್ನು 'ತೆಂಕಲಕೋಟೆ' ಎಂದು ನಮೂದಿಸಲಾಗಿದೆ.[೨೨]

## ೯) ಹಂಡೆ ಪಾಳೆಗಾರರು : (ಕ್ರಿ.ಶ. ೧೫೮೮-೧೭೨೫ರವರೆಗೆ)

ಕ್ರಿ.ಶ. ೧೫೬೫ ರಲ್ಲಿ ವಿಜಯನಗರ ಸಾಮ್ರಾಜ್ಯದ ಪತನವಾದ ನಂತರ ನಾಲ್ಕೈದು ವರ್ಷ ಈ ಪ್ರದೇಶ ಅನಾಯಕವಾಗಿತ್ತು. ಆ ಕಾಲದಲ್ಲಿ ಮುತ್ತಿಗೆ ಎಂಬ ಗ್ರಾಮದಲ್ಲಿ ಹಂಡೆ ಕುರುಬರ ಜಾತಿಯವನಾದ ಬಾಲದ ಹನುಮಪ್ಪ ನಾಯಕನು ಗೌಡಿಕೆ ಮಾಡಿಕೊಂಡು ಇರುತ್ತಿದ್ದನು. ಇವನೇ ಹಂಡೆ ಮನೆತನದ ಮೂಲ ಪುರುಷ ಆಗ ಈ ಪ್ರಾಂತ್ಯವನ್ನೆಲ್ಲಾ ಬಿಜಾಪುರ ಆದಿಲ್ ಷಾ ಆಳುತ್ತಿದ್ದರು. ಹನುಮಪ್ಪನಾಯಕನು ಸುಲ್ತಾನನ ವಿಶ್ವಾಸ ಸಂಪಾದಿಸಿಕೊಂಡು ಅದರಿಂದ ಫೌಜುದಾರಿ ಮೊಕರೂರು ಪಡೆದಿದ್ದನು. ಅವನ ಸೇವೆಗೆ ಮೆಚ್ಚಿದ ಸುಲ್ತಾನನು ಹನುಮಪ್ಪನಾಯಕನಿಗೆ 'ವಜೀರ' ಎಂಬ ಬಿರುದನ್ನು ಕೊಟ್ಟನು.

ಆಗ ಬಂಕಾಪುರದಲ್ಲಿ ಅರಾಜಕತೆ ಇದ್ದುದ್ದರಿಂದ ಅದನ್ನು ಶಮನ ಮಾಡಲು ಎರಡನೇಯ ಇಬ್ರಾಹಿಂ ಆದಿಲ್ ಷಾನು ಬಾಲದ ಹನುಮಪ್ಪ ನಾಯಕನನ್ನು ಕಳುಹಿಸಿಕೊಟ್ಟನು. ಬಂಕಾಪುರಕ್ಕೆ ಹೋಗುವ ಮೊದಲು ಈತನು ಆದಿಲ್ ಷಾ ನಿಂದ ಬಳ್ಳಾರಿ ತೆಕ್ಕಲಕೋಟೆ, ಕುರುಗೋಡುಗಳ ನಾಡ ಗೌಡಿಕೆಯನ್ನು ಪಡೆದನು. ಕ್ರಿ.ಶ. ೧೫೮೮ ರಲ್ಲಿ ಬಂಕಾಪುರವನ್ನು ಗೆದ್ದು, ಕುರುಗೋಡಿಗೆ ಬಂದು ಅಲ್ಲಿಂದ ಬಳ್ಳಾರಿಗೆ ಬಂದು ಅಲ್ಲಿ ಕೋಟೆಯನ್ನು ಕಟ್ಟಿಸಿದಲ್ಲದೇ ತೆಕ್ಕಲಕೋಟೆ ಪರಗಣೆ, ಸಿರುಗುಪ್ಪ ಪರಗಣೆ ಮುಂತಾದ ಪರಗಣೆಗಳನ್ನು ಸಂಪಾದಿಸಿಕೊಂಡಿದ್ದ, ಹೀಗೆ ಬಿಜಾಪುರದ ಸುಲ್ತಾನರಿಗೆ ಅಧೀನನಾಗಿದ್ದನು.

ತದನಂತರ ತೆಕ್ಕಲಕೋಟೆ, ಸಿರುಗುಪ್ಪ ಪ್ರದೇಶವು ದ್ಯಾಮಣ್ಣನಾಯಕ ಮತ್ತು ಚಿಕ್ಕಮಲಕಪ್ಪ ನಾಯಕನಿಗೆ ದೊರೆತು. ಇವುಗಳಿಗೆ ದ್ಯಾಮಣ್ಣನಾಯಕ ದೊರೆಯಾಗಿ ಚಿಕ್ಕಮಲಕಪ್ಪನಾಯಕನು ವಜೀರನಾದನು. ಬಿಜಾಪುರ ಸುಲ್ತಾನರು ಇವನ ಮೇಲೆ ದಾಳಿ ಮಾಡಿದಾಗ ಅವನಿಗೆ ಹಣವನ್ನು ಕೊಟ್ಟು ವಾಪಾಸ್ ಕಳುಹಿಸಿದನು. ದ್ಯಾಮಣ್ಣನಾಯಕನು ಕೆಲವು ವರ್ಷ ರಾಜ್ಯಭಾರ ಮಾಡಿ ಕ್ರಿ.ಶ. ೧೬೪೯ ರಲ್ಲಿ ಮರಣ ಹೊಂದಿದಾಗ ಅವನ ಮಗ ಪವಾಡದ ರಾಮಪ್ಪನಾಯಕನು ನಾಲ್ಕು ವರ್ಷ ರಾಜ್ಯಭಾರ ಮಾಡಿ ಕ್ರಿ.ಶ. ೧೬೫೩ ರಲ್ಲಿ ಸಂತಾನವಿಲ್ಲದೇ ಮರಣ ಹೊಂದಿದನು. ಇವನ ನಂತರ ಬಳ್ಳಾರಿಯಲ್ಲಿದ್ದ ಚಿಕ್ಕಮಲಕಪ್ಪನಾಯಕನ ಮಗ ಚಿಕ್ಕ ನಾಯಕ ಸಾಹೇಬ ಪ್ರದೇಶಕ್ಕೆ ಒಡೆಯನಾದನು. ಹಂಡೆ ಚಿಕ್ಕನಾಯಕ ಸಾಹೇಬನು ಮರಣ ಹೊಂದಲಾಗಿ ದೇವಪ್ಪ ನಾಯಕನು ಬಳ್ಳಾರಿ, ತೆಕ್ಕಲಕೋಟೆಗಳನ್ನು ಆಳಿಕೊಂಡಿದ್ದನು.

ಕುರುಗೋಡಿಗೆ ಬಂದು ಪಿತೂರಿ ಮಾಡಿ ಒಳಜನರ ಸಹಾಯದಿಂದ ಕುರುಗೋಡು, ಸಿರುಗುಪ್ಪ, ಪರಗಣೆಯನ್ನು ಕ್ರಿ.ಶ. ೧೬೯೮ರಲ್ಲಿ ಮತ್ತೆ ತನ್ನ ಅಧಿಪತ್ಯಕ್ಕೆ ಒಳಪಡಿಸಿಕೊಂಡನು. ಬಾದಷಾಹನಿಂದ ಸೋಮಸಮುದ್ರ ಎಂಬ ಗ್ರಾಮದ ಸನದ್ದನ್ನು ಬರೆಯಿಸಕೊಂಡನು. ನಂತರ ತೆಕ್ಕಲಕೋಟೆ ಕಂಚುಗಾರ ಬೆಳಗಲ್ಲು, ಹಚ್ಚೊಳ್ಳಿ, ಸಿರುಗುಪ್ಪ ಮುಂತಾದ ಗ್ರಾಮಗಳನ್ನು ತನ್ನ ಸ್ವಾಧೀನ ಮಾಡಿಕೊಂಡು ಆಳುತ್ತಿದ್ದನು.[೨೩]

## ೧೦) ಬಳ್ಳಾರಿ ಪಾಳೆಗಾರರ ಆಳ್ವಿಕೆ (ಕ್ರಿ.ಶ. ೧೬೯೩ ರಿಂದ ೧೭೭೫ ರವರೆಗೆ )

ದೊಡ್ಡತಲೆ ರಾಮಪ್ಪನಾಯಕನು ೧೦ ವರ್ಷದ ಬಾಲಕನಾಗಿದ್ದರಿಂದ ನೀಲಮ್ಮ ಕ್ರಿ.ಶ. ೧೭೩೧ ರಿಂದ ಕ್ರಿ.ಶ. ೧೭೩೫ರ ವರೆಗೆ ರಾಜ್ಯವನ್ನು ನೋಡುಕೊಳ್ಳುತ್ತಿದ್ದಳು. ಆಗ ಆದವಾನಿ ಸುಲ್ತಾನನು ಆಕ್ರಮಣ ಮಾಡಿ ತೆಕ್ಕಲಕೋಟೆಯನ್ನು ಸ್ವಾಧೀನ ಮಾಡಿಕೊಂಡನು. ದೊಡ್ಡ ತಲೆ ರಾಮಪ್ಪನಾಯಕನು ಕ್ರಿ.ಶ. ೧೭೩೫ ರಲ್ಲಿ ನೇರವಾಗಿ ಆಳ್ವಿಕೆಗೆ ಬಂದು ಕ್ರಿ.ಶ ೧೭೬೫ ರ ವರೆಗೆ ಪ್ರಬಲನಾಗಿದ್ದು ಅನೇಕ ಜನಹಿತ ಕಾರ್ಯಗಳನ್ನು ಮಾಡಿದನು. ಕೆರಗಳನ್ನು, ಬಾವಿಗಳನ್ನು, ಸಿಂಹಾಸನದ ಕಟ್ಟೆಯನ್ನು ಕಟ್ಟಿಸಿದನು. ಆನೆಗುಂದಿಯವರಿಗೂ ಮತ್ತು ದೊಡ್ಡ ತಲೆ ರಾಮಪ್ಪನಾಯಕನಿಗೂ ಯುದ್ಧ ನಡೆಯುತ್ತಲೇ ಇತ್ತು. ಅವರಿಗೆ ಸೇರಿದ ಸಿರಿಗೇರಿ, ಎಮ್ಮಿಗನೂರುಗಳನ್ನು ಸ್ವಾಧೀನ ಪಡಿಸಿಕೊಂಡನು.

ತೆಕ್ಕಲಕೋಟೆಗೆ ೩ ಸಲ ಮುತ್ತಿಗೆ ಹಾಕಿದರು ಗೆಲ್ಲಲಾಗಲಿಲ್ಲ. ಹನುಮಪ್ಪನಾಯಕನು ಕ್ರಿ.ಶ. ೧೭೬೫ – ಕ್ರಿ.ಶ. ೧೭೬೯ ರ ವರೆಗೆ ರಾಜ್ಯಭಾರ ಮಾಡಿದನು. ಇವನ ಕಾಲದಲ್ಲಿ ನಿಜಾಮು ಅಲಿಖಾನ್‌ನ ಕಡೆಯಿಂದ ಬಸಾಲೆ–ಜಂಗ್–ಬಹದ್ದೂರ್‌ನು ಬಂದು ಬಳ್ಳಾರಿಗೆ ಮುತ್ತಿಗೆ ಹಾಕಿ ವಶಪಡಿಸಿಕೊಂಡನು. ಇದೇ ಸಂದರ್ಭದಲ್ಲಿ ತೆಕ್ಕಲಕೋಟೆಯಲ್ಲಿನ ವೀರಭದ್ರ ದೇವಾಲಯದಲ್ಲಿರುವ ಕ್ರಿ.ಶ. ೧೭೫೯ ರ ಶಾಸನ ತಿಳಿಸುವಂತೆ ಆದೋನಿಯ ಜಹಾಗೀರು ದಾರನಾದ ಬಸಾಲತ್ ಜಂಗನು ಹಸ್ಸುಮುಲ್ಲಾಖಾನ್ ಎನ್ನುವವನನ್ನು ತೆಕ್ಕಲಕೋಟೆ ಹೊಸ ಅಮಲ್ದಾರನನ್ನಾಗಿ ನೇಮಿಸುತ್ತಾನೆ. ಇದು ಗ್ರಾಮದ ಪ್ರವೇಶದಲ್ಲಿರುವ ವೀರಭದ್ರೇಶ್ವರ ದೇವಸ್ಥಾನದಲ್ಲಿರುವ ಶಿಲಾಶಾಸನದಿಂದ ವಿಧಿತವಾಗುತ್ತದೆ. ಅದರಲ್ಲಿ ನೇಮಕಾತಿ ಹೊಂದಿದ ಹೊಸ ಅಮಲ್ದಾರನಿಗೆ ಸಹಕರಿಸುವಂತೆ ಇಲ್ಲವೇ ಪರಿಣಾಮಗಳನ್ನು ಎದುರಿಸುವಂತೆ ಸೂಚನೆ ನೀಡಲಾಗಿದೆ. ಮುಂದುವರೆದ ಕೋಟೆ, ಪೇಟೆಸ್ಥಳ, ಪರಸ್ಥಳ ಎಂದು ಉಲ್ಲೇಖಿಸಿದೆ.[೨೪]

## ೧೧) ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ :–

ಹೈದರಾಲಿಯು ಹಂಡೆ ಪಾಳೆಗಾರನಾದ ದೊಡ್ಡಪ್ಪನಾಯಕನನ್ನು ಸೋಲಿಸಿ, ಬಳ್ಳಾರಿ ಕೋಟೆಯನ್ನು ವಶಪಡಿಸಿಕೊಂಡನು ಆಗ ಬಳ್ಳಾರಿ, ಕುರುಗೋಡು ಮತ್ತು ತೆಕ್ಕಲಕೋಟೆಗಳು ಹೈದರಾಲಿಯ ವಶವಾದವು. ಇದೇ ಅವಧಿಯಲ್ಲಿ ತೆಕ್ಕಲಕೋಟೆಯಲ್ಲಿ ಒಂದು ಚೌಕಕಾರದ ಕೋಟೆಯನ್ನು ನಿರ್ಮಿಸಿದರು. ಹೀಗೆ ಈ ಮೂರು ಪರಗಣಗಳನ್ನು ರಾಯದುರ್ಗದ ದಿವಾನನಾದ ಕೃಷ್ಣಪ್ಪನಾಯಕನಿಗೆ ವಹಿಸಿ ಆದವಾನಿ ಕೋಟೆ ಮೇಲೆ ದಂಡೆತ್ತಿ ಹೋದ ಬಗ್ಗೆ ಕುರುಗೋಡು ಕೈಫಿಯತ್ತು ಉಲ್ಲೇಖಿಸುತ್ತದೆ.

ನಂತರ ಬಂದ ಟಿಪ್ಪುಕೂಡ ಬಳ್ಳಾರಿ, ಕುರುಗೋಡು, ತೆಕ್ಕಲಕೋಟೆ, ಪರಗಣಗಳ ಮೇಲೆ ದಾಳಿ ಮಾಡಿ ವಶಕ್ಕೆ ತೆಗೆದುಕೊಂಡನು ಇದೇ ಸಂದರ್ಭದಲ್ಲಿ ತಾಲ್ಲೂಕಿನ ಗ್ರಾಮವಾದ ಕೆಂಚನಗುಡ್ಡದ ಪಾಳೆಯಗಾರರ ಮೇಲೂ ದಾಳಿಮಾಡಿದನು. ಇದನ್ನು ಸ್ವಾಧೀನ ಪಡಿಸಿಕೊಂಡು ನರಹರಿಶಾಸ್ತ್ರಿ ಎಂಬುವವನಿಗೆ ಕೊಟ್ಟನು. ಇಲ್ಲಿ ಆಳ್ವಿಕೆ ಮಾಡುತ್ತಿದ್ದ ಪಾಳೆಗಾರರ ವಂಶಕ್ಕೆ ಸೇರಿದ ರಾಣಿಯಾದ ತಂಗಮ್ಮ ಆವೇಳೆಗೆ ಕೆಂಚನಗುಡ್ಡ ಬಿಟ್ಟು ತಲೆಮರಿಸಿಕೊಂಡಿದ್ದಳು ಆದರೆ ಅವಳ ಇಬ್ಬರೂ ಮಕ್ಕಳು ಟಿಪ್ಪು ಸುಲ್ತಾನನ ಕೈಸೆರೆಯಾದರು.

ಟಿಪ್ಪು ಸುಲ್ತಾನನು ಅವಳ ಒಬ್ಬ ಮಗನನ್ನು ಕೊಂದು, ಮತ್ತೊಬ್ಬನನ್ನು ಇಸ್ಲಾಂ ಧರ್ಮಕ್ಕೆ ಮತಾಂತರಗೊಳಿಸಿದ ಬಗ್ಗೆ ಬಳ್ಳಾರಿ ಮತ್ತು ಕುರುಗೋಡು ಕೈಫಿಯತ್ತುಗಳಿಂದ ತಿಳಿದುಬರುತ್ತದೆ.

**೧೨) ಬ್ರಿಟೀಷರ ಆಳ್ವಿಕೆ :-**

ವಿಜಯನಗರ ಸಾಮ್ರಾಜ್ಯದ ಪತನದ ತರುವಾಯ ಬಿಜಾಪುರದ ಸುಲ್ತಾನರು, ಮರಾಠರು, ಮೊಘಲರು, ಸ್ಥಳೀಯ ಪಾಳೆಗಾರರು ಮತ್ತು ಹೈದರಾಲಿಹಾಗೂ ಟಿಪ್ಪುಸುಲ್ತಾನರು ಕೂಡ ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ್ದಲ್ಲದೆ, ವಶಪಡಿಸಿಕೊಂಡಿದ್ದುಂಟು. ಕ್ರಿ.ಶ. ೧೭೯೯ ರಲ್ಲಿ ಟಿಪ್ಪು ಪತನದ ನಂತರ ಈ ಭೂಪ್ರದೇಶವು ಹೈದ್ರಾಬಾದಿನ ನಿಜಾಮನಿಗೆ ಕೊಡಲಾಯಿತು.

ಆಗ ಬ್ರಿಟೀಷರ ಕೆಲವು ಪದ್ಧತಿಗಳಾದ ಸಹಾಯಕ ಸೈನ್ಯಪದ್ಧತಿ, ದತ್ತು ಮಕ್ಕಳಿಗೆ ಹಕ್ಕಿಲ್ಲ, ಕುತಂತ್ರದ ರಾಜಕೀಯ ಸೋಗು, ರಾಷ್ಟ್ರವಿಭಜನೆ, ತ್ಯಾಗ, ಬಲಿದಾನ, ಹೋರಾಟ, ನಿರಾಶ್ರಿತರ ಬವಣೆ, ಬಡತನ, ಆರ್ಥಿಕದುರ್ಬಲತೆ, ಅನಕ್ಷರತೆ, ನಿರುದ್ಯೋಗ, ಸೋಮಾರಿತನ ವಸತಿ ಸೌಲಭ್ಯ ಜನಸಂಖ್ಯೆ ಸ್ಫೋಟ ಇನ್ನು ಮುಂತಾದ ಬ್ರಿಟೀಷರ ಆಡಳಿತದ ನ್ಯೂನ್ಯತೆಗಳು ಮತ್ತು ಇಂತಹ ಕೆಲವು ಜೀವನಾವಶ್ಯಕ ಸಮಸ್ಯೆಗಳನ್ನು ಮನಗಂಡ ಹೈದರಬಾದಿನ ನಿಜಾಮ ಬ್ರಿಟೀಷರ ಸಹಾಯಕ ಸೈನ್ಯ ಪದ್ಧತಿಗೆ ಸಹಿ ಹಾಕಿ ಕ್ರಿ.ಶ. ೧೮೦೦ ರಲ್ಲಿ ತೆಕ್ಕಲಕೋಟೆ ಮತ್ತು ಸಿರುಗುಪ್ಪ ಪ್ರದೇಶವನ್ನೊಳಗೊಂಡ ಬಳ್ಳಾರಿ ಜಿಲ್ಲೆಯನ್ನು ದತ್ತಿಯಾಗಿ ಬಿಟ್ಟುಕೊಟ್ಟನು.[೨೫]

ಈ ರಿತಿಯಾಗಿ ಅನೇಕ ಅರಸು ಮನೆತನಗಳ ಆಳ್ವಿಕೆಗೆ ಒಳಪಟ್ಟಿದ್ದು, ಇಲ್ಲಯ ಶಾಸನಗಳು, ದೇವಾಲಯಗಳು, ಮೂರ್ತಿಶಿಲ್ಪಗಳು ಹಾಗೂ ಇತರೆ ಪುರಾತತ್ವೀಯ ಅವಶೇಷಗಳ ಅಧ್ಯಯನದ ಹಿನ್ನೆಲೆಯಲ್ಲಿ ತಿಳಿದುಬಂದಿದೆ.

## ಅಡಿಟಿಪ್ಪಣಿ

೧. ನಾಗರಾಜ ಹೊಸೂರಕರ್, ೨೦೦೮, **ಮೈಲಾರಲಿಂಗ ಆಚರಣೆ ಒಂದು ಸಾಂಸ್ಕೃತಿಕ ಅಧ್ಯಯನ**, ಪು.ಸಂ. ೮

೨. ಎನ್. ರಾಮಕೃಷ್ಣಯ್ಯ, ೨೦೧೪, **ಸಿರುಗುಪ್ಪ ತಾಲೂಕಿನ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ**, ಪು.ಸಂ. ೭-೧೧

೩. ವಾಸುದೇವ ಬಡಿಗೇರ, ೨೦೧೨, **ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ**, ಪು.ಸಂ. ೨-೩

೪. ಗಿರಿಜ, ೨೦೧೧, **ಸಂಡೂರು ತಾಲೂಕು ಒಂದು ಚಾರಿತ್ರಿಕ ಅಧ್ಯಯನ**, ಪು.ಸಂ. ೧೯

೫. ಎನ್, ರಾಮಕೃಷ್ಣಯ್ಯ, ಪೂರ್ವೋಕ್ತ ಪು.ಸಂ.೩೦೩

೬. ಅದೇ, ಪು.ಸಂ. ೩೦೪

೭. ಎ. ಕರಿಬಸಪ್ಪ, ೨೦೦೯, **ಬಳ್ಳಾರಿ ಜಿಲ್ಲೆಯ ಐತಿಹ್ಯಗಳು**, ಪು.ಸಂ. ೯೧-೯೨

೮. ಎನ್. ರಾಮಕೃಷ್ಣಯ್ಯ, ಪೂರ್ವೋಕ್ತ, ಪು.ಸಂ. ೫೧-೫೨

೯. ದೇವರಕೊಂಡಾರೆಡ್ಡಿ (ಪು.ಸಂ), ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ**, ಪು.ಸಂ.೧೩೦-೧೩೫

೧೦. ಅದೇ, ಪು.ಸಂ. ೧೩೪-೧೩೫

೧೧. ವೈ. ಹನುಮಂತರೆಡ್ಡಿ, ೨೦೦೭-೮, **ಬಳ್ಳಾರಿ ಜಿಲ್ಲೆಯ ಐತಿಹಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ**, ಪು.ಸಂ. ೫೭

೧೨. ಎಲ್. ಶ್ರೀನಿವಾಸ, ೨೦೧೦, **ಹಂಪಿ ಪರಿಸರದ ಆದಿಮನವನ ನೆಲೆಗಳು**, ಪು.ಸಂ. ೭೦-೭೧

೧೩. ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ೨೦೦೯, ಪು.ಸಂ.೪೯೩

೧೪. ಎಲ್. ಶ್ರೀನಿವಾಸ, ಪೂರ್ವೋಕ್ತ, ಪು.ಸಂ. ೭೧

೧೫. ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ, ೨೦೦೯, ಪು.ಸಂ.೪೯೩

೧೬. ಎನ್. ರಾಮಕೃಷ್ಣಯ್ಯ, ಪೂರ್ವೋಕ್ತ, ಪು.ಸಂ. ೨೪

೧೭. ಎಲ್. ಶ್ರೀನಿವಾಸ, ಪೂರ್ವೋಕ್ತ, ಪು.ಸಂ. ೭೧-೭೨

೧೮. ಎನ್. ರಾಮಕೃಷ್ಣಯ್ಯ, ಪೂರ್ವೋಕ್ತ, ಪು.ಸಂ. ೨೬

೧೯. ಅದೇ, ಪು.ಸಂ. ೩೨-೩೬

೨೦. ಅದೇ, ಪು.ಸಂ. ೩೭-೩೮

೨೧. ಅದೇ, ಪು.ಸಂ. ೩೮-೪೫

೨೨. ಅದೇ, ಪು.ಸಂ. ೬೩-೬೭

೨೩. ಅದೇ, ಪು.ಸಂ. ೭೦-೭೪

೨೪. ಅದೇ, ಪು.ಸಂ. ೭೬-೭೯

೨೫. ಅದೇ, ಪು.ಸಂ. ೮೨-೮೪.

# ಅಧ್ಯಾಯ-೩

## ತೆಕ್ಕಲಕೋಟೆ ಮಲ್ಲಯ್ಯ (ಮೈಲಾರ)

ಯಾವುದೇ ಒಂದು ಪರಂಪರೆಯನ್ನು ಅರಿಯಬೇಕಾದರೆ ಅದಕ್ಕೆ ಪೂರಕ ಅಂಶಗಳು ಪ್ರಧಾನವಾಗಿರುತ್ತದೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಶಾಸನಗಳು, ಪುರಾಣಗಳು, ಐತಿಹ್ಯಗಳು, ನಾಣ್ಯಗಳು, ಪಳಿಯುಳಿಕೆಗಳು, ಕಾವ್ಯಗಳು ಮೊದಲಾದ ಅಂಶಗಳು ಒಂದು ಜನಾಂಗದ ಬಗ್ಗೆ ಸ್ಪಷ್ಟ ಮಾಹಿತಿಯನ್ನು ಒದಗಿಸುತ್ತವೆ. ಇದರಲ್ಲಿ ಮೈಲಾರ ಸಂಪ್ರದಾಯವು ಒಂದಾಗಿದೆ. ಈ ಸಂಪ್ರದಾಯವು ಅನಾದಿಕಾಲದಿಂದಲೂ ಪ್ರಸಿದ್ಧವಾಗಿತ್ತು ಎಂಬುದಕ್ಕೆ ಅನೇಕ ಪುರಾಣೋಕ್ತ ಉಲ್ಲೇಖಗಳಿವೆ. ಅವುಗಳಲ್ಲಿ ಬ್ರಹ್ಮಾಂಡ ಪುರಾಣದ ಉಲ್ಲೇಖ ಅತ್ಯಂತ ಪ್ರಸಿದ್ಧವಾದುದು. ಅದೇ ರೀತಿ ಇತಿಹಾಸದಲ್ಲಿಯೂ ಸಹ ಮೈಲಾರನನ್ನು ಕುರಿತು ಅನೇಕ ವಿವರಗಳು ಶಾಸನಗಳ ಹಾಗೂ ದಾನಪತ್ರಗಳ ಮೂಲಕ ಉಲ್ಲೇಖಿತವಾಗಿವೆ. ಈ ಮೈಲಾರ ಕ್ಷೇತ್ರಗಳಲ್ಲಿ ಒಂದಾಗಿದ್ದ ತೆಕ್ಕಲಕೋಟೆ ಮಲ್ಲಯ್ಯನ ಚಾರಿತ್ರಿಕ ಹಿನ್ನಲೆಯ ಕುರಿತು ಈ ಕೆಳಕಂಡಂತೆ ನೋಡಬಹುದಾಗಿದೆ.

### ೩.೧ ಮಲ್ಲಯ್ಯನ ಚಾರಿತ್ರಿಕ ಹಿನ್ನಲೆ

ಪ್ರಾಚೀನ ಕಾಲದಲ್ಲಿ ಇಂದಿನ ಆಂಧ್ರ ಪ್ರದೇಶದ ಕರ್ನೂಲ್ ಜಿಲ್ಲೆಯ ಆಲೂರು ತಾಲೂಕಿನ ಹೊಳಗುಂದ ಬೇಡರು ಬೇಟೆಯನ್ನು ಅರಸುತ್ತ ಬಂದು ಮಲ್ಲಯ್ಯನ ಗುಡ್ಡದಲ್ಲಿ ತಂಗುತ್ತಾರೆ. ಸಹೋದರರೊಂದಿಗೆ ತಂಗಿ ಗಂಗಿಮಾಳಮ್ಮ ಬಂದಿದ್ದಳು. ಆ ದಿವಸ ರಾತ್ರಿ ಮಲ್ಲಯ್ಯ ರೂಪವತಿಯಾದ ಮಾಳಮ್ಮನನ್ನು ವರಿಸುತ್ತಾನೆ. ಬೆಳಗ್ಗೆ ಎದ್ದು ಈ ವಿಷಯ ತಿಳಿದ ಬೇಡ ಸಹೋದರರು ತಮ್ಮ ತಂಗಿಯನ್ನು ಮಲ್ಲಯ್ಯನೊಂದಿಗೆ ಮದುವೆ ಮಾಡಿಕೊಟ್ಟು ಅಲ್ಲಿಯೇ ಬಿಟ್ಟು ಹೋಗುತ್ತಾರೆ. ಮುಂದೆ ಮೈಲಾರಲಿಂಗ ತುಪ್ಪದ ಮಾಳಮ್ಮನನ್ನು ವರಿಸುವ ಸಂದರ್ಭದಲ್ಲಿ ಗಂಡ ಹೆಂಡಿರ ಮಧ್ಯ ಜಗಳ ಆರಂಭವಾಗುತ್ತದೆ. ಇದರಿಂದ ಮನಸ್ತಾಪ ಮಾಡಿಕೊಂಡ ಗಂಗಿಮಾಳಮ್ಮ ತವರು ಮನೆಯಾದ ಹೊಳಗುಂದಿಗೆ ಹೊಗುತ್ತಾಳೆ.

ಹೊಳಗುಂದಿಯ ಗ್ರಾಮಸ್ಥರೆಲ್ಲರೂ ಸೇರಿ ತಮ್ಮ ಗ್ರಾಮದ ಹೆಣ್ಣು ಮಗಳನ್ನು ಗಂಡನ ಮನೆಗೆ ಬಿಟ್ಟು ಬರಲು ಅಗಿ ಹುಣ್ಣಿಮೆಯಂದು ತೆಕ್ಕಲಕೋಟೆಗೆ ಹೊಗುತ್ತಾರೆ ಆ ದಿನ ಮಲ್ಲಯ್ಯನ ತೇರು ಎಳೆಯುತ್ತದೆ. ಮರುದಿವಸ ಮಲ್ಲಯ್ಯನಿಗೆ ನಿನ್ನ ಹೆಂಡತಿಯನ್ನು ಕರೆದುಕೊಳ್ಳಬೇಕೆಂದು ಪರಿಪರಿಯಾಗಿ ಬೇಡಿಕೊಳ್ಳುತ್ತಾರೆ. ಇದಕ್ಕೆ ಜಪ್ಪಯ್ಯಾ ಎಂದರೂ ಮಲ್ಲಯ್ಯ ಒಪ್ಪಕೊಳ್ಳುವುದಿಲ್ಲ. ನಿನ್ನ ಅನುಮತಿ ಇಲ್ಲದೆ ನಮ್ಮ ಹೆಣ್ಣು ಮಗಳು ತವರು ಮನೆಗೆ ಬಂದಿರುವುದು ತಪ್ಪಾಗಿದೆ. ಎಂದು ಅವನ ಸಹೋದರ ಕೊಂತಮಯ್ಯ ಹಾಗೂ ಅವನ ತಮ್ಮ ಮಲ್ಲಯ್ಯನಿಗೆ ಶಿರವನ್ನು ಅರ್ಪಿಸುತ್ತಾರೆ. ಅವರ ಶಿರಗಳನ್ನು ಶಿಲೆಯಲ್ಲಿ ಖಂಡರಣೆ ಮಾಡಿ ಸಭಾ ಮಂಟಪದಲ್ಲಿ ಇಡಲಾಗಿದೆ. ಇದರ ಪ್ರಯುಕ್ತ ಪ್ರತಿ ವರ್ಷ ಜಾತ್ರೆಯಂದು ಶಿರಸ್ಸಿನ ಪವಾಡ ನಡೆಯುತ್ತಿತ್ತು. ಆದರೆ ಈ ಆಚರಣೆ ಈಗ ನಿಂತುಹೋಗಿ, ಆ ಬೇಡ ಕುಟುಂಬದ ಸದಸ್ಯರು ದೇವಾಲಯದ ಆವರಣಕ್ಕೆ ಬಂದು ಒಬ್ಬೊಬ್ಬರಾಗಿ ಶಸ್ತ್ರಗಳನ್ನು ಧರಿಸಿ ಕೈಯಲ್ಲಿ ಖಡ್ಗ ಹಿಡಿದು ಕೂಗುತ್ತಾ ಕುಣಿಯುತ್ತಾ ಮೈಲಾರಲಿಂಗನ ಮುಂದೆ ಬರುತ್ತಾರೆ. ಇದು ಈಗ ನಡೆಯುತ್ತಿರುವ ವೀರಭದ್ರನ ಆಚರಣೆಯನ್ನು ನೆನಪಿಗೆ ತರುತ್ತದೆ.

ಕೆಲವು ಕಡೆ ಇದನ್ನು ಬಾಯಿಗೆ ಬೀಗ ಹಾಕಿಕೊಳ್ಳುವ ಆಚರಣೆಯಂತಲೂ ಕರೆಯುತ್ತಾರೆ. ಮಹಾರಾಷ್ಟ್ರದಲ್ಲಿ ಮೈಲಾರಲಿಂಗನಿಗೆ ಗುಗ್ಗಳ ಸಂಪ್ರದಾಯವು ಇರುವುದರಿಂದ ವೀರಭದ್ರನ ಆಚರಣೆಯ ಮೂಲ ಉಗಮವನ್ನು ಸಹಜವಾಗಿ ಕಾರ್ಯ ನಡೆಯುತ್ತದೆ. ಆದರೂ ಮೈಲಾರಲಿಂಗ ಇದಾವುದಕ್ಕೂ ಸಮಾಧಾನ ಗೊಳ್ಳದೆ, ತನ್ನ ಹೆಂಡತಿಯನ್ನು ತಿರಸ್ಕರಿಸುತ್ತಾನೆ.

ಮೊದಲ ದಿನವೇ ಹೊಳಗುಂದಿ ಗ್ರಾಮಸ್ತರು ಗಂಗಿಮಾಳಮ್ಮನ ಸಹೋದರ ಕೊಂತೆಪ್ಪನ ಲೊಹದ ಮೂರ್ತಿಯನ್ನು ತಮ್ಮ ಸುಪರ್ಧಿಗೆ ಪಡೆದಿರುತ್ತಾನೆ. ಪ್ರತಿವರ್ಷ ತಾವು ತಂಗುವ ಸ್ಥಳದಲ್ಲಿ ಶಿಭಾರ ಕಟ್ಟಗೆ ಅದನ್ನು ಇಟ್ಟು ಪೂಜೆ ಸಲ್ಲಿಸುತ್ತಾರೆ. ಶಸ್ತ್ರ ಆಚರಣೆಗೂ ಮೈಲಾರಲಿಂಗಪ್ಪ ಶಾಂತನಾಗದಿರುವುದಕ್ಕೆ ಮುಂದಿನ ಕಾರ್ಯದಲ್ಲಿ ತೊಡಗುತ್ತಾರೆ. ತಮ್ಮ ಹೆಣ್ಣನ್ನು ಮರಳಿ ಕರೆದೊಯ್ದರೆ ಮಾನ-ಮರ್ಯಾದೆ ಉಳಿಯುವುದಿಲ್ಲ ವೆಂದೂ, ತಮ್ಮ ಹೆಣ್ಣುಮಗಳು ಮಾಡಿದ ತಪ್ಪನ್ನು ಮನ್ನಿಸಬೇಕೆಂದು, ಆತನ ಪವಾಡಗಳನ್ನು ಹೊಗಳುತ್ತಾರೆ. ಆಗ ಮೈಲಾರಲಿಂಗಪ್ಪ ಸಮಾಧಾನವಾಗುತ್ತಾನೆ. ೩ನೇ ದಿನ ಹೊಳಗುಂದಿಯ ಬೇಡರು ತಮ್ಮ ಹೆಣ್ಣುಮಗಳನ್ನು ಮಲ್ಲಯ್ಯನಿಗೆ ಒಪ್ಪಸಿ ಸಂತೋಷದಿಂದ ಊರಿಗೆ ಹೊಗುತ್ತಾರೆ. ಈ ಮೂರುದಿವಸಗಳ ಅವಧಿಯಲ್ಲಿ ಎಲ್ಲಾ ಕಾರ್ಯಗಳು ಮುಗಿಯುವವರೆಗೆ ಮೈಲಾರಲಿಂಗನ ಬಲಭಾಗದಲ್ಲಿರುವ ತುಪ್ಪದ ಮಾಳಮ್ಮನ ಗರ್ಭಗೃಹದ ಪ್ರವೇಶ ದ್ವಾರವನ್ನು ಬಟ್ಟೆಯಿಂದ ಮುಚ್ಚಲಾಗಿರುತ್ತದೆ.[೧]

ಇದೆ ರೀತಿಯಾಗಿರುವ ಮತ್ತೊಂದು ಕತೆಇದೆ. ತೆಕ್ಕಲಕೋಟೆಯ ಗ್ರಾಮದ ಜನರು ಹೊಳಗುಂದದ ಮಲ್ಲಯ್ಯನ ಪರಮ ಭಕ್ತಾದಿಗಳಾಗಿದ್ದರು. ಇವರು ಪ್ರತಿದಿನ ಮಲ್ಲಯ್ಯನ ದರುಶನ ಮಾಡದೇ ಒಂದು ಹನಿ ನೀರು ಸಹ ಕುಡಿಯುತ್ತಿರಲಿಲ್ಲ, ಹೀಗೆ ಒಂದುದಿನ ನದಿಯು ತುಂಬಿ ಹರಿಯುತ್ತದೆ. ಆಗ ತೆಕ್ಕಲಕೋಟೆಯ ಭಕ್ತರಿಗೆ ನದಿಯನ್ನು ದಾಟಿ ಮಲ್ಲಯ್ಯನ ದರುಶನ ಪಡೆಯಲು ಸಾಧ್ಯವಾಗುವುದಿಲ್ಲ ಆ ಸಮಯದಲ್ಲಿ ಭಕ್ತರು ಮಲ್ಲಯ್ಯನನ್ನು ಭಕ್ತಿಯಿಂದ ಮನದಲ್ಲಿ ನೆನೆಯುತ್ತಾರೆ. ಅಗ ಮಲ್ಲಯ್ಯನು ಪ್ರತ್ಯಕ್ಷವಾಗಿ ನೀವು ಹೀಗೆ ಹಿಂತಿರುಗಿ ನಿಮ್ಮ ಊರಿಗೆ ತೆರಳಿ ನಾನು ನಿಮ್ಮ ಹಿಂದೆ ಬರುತ್ತೇನೆ ನೀವು ಎಲ್ಲಿ ನನ್ನನ್ನು ಹಿಂದಿರುಗಿ ನೊಡುತ್ತೀರೋ ಅಲ್ಲಿ ನಾನು ಸ್ಥಾಪನೆಯಾಗುತ್ತೇನೆ ಎಂದು ಹೇಳುತ್ತಾನೆ. ಆಗ ಭಕ್ತರು ತಮ್ಮ ಸ್ಥಳಕ್ಕೆ ಹಿಂತಿರುಗಿ ಹೊಗುತ್ತಾರೆ. ತೆಕ್ಕಲಕೋಟೆ ಇನ್ನು ೨ ಕಿ.ಮೀ. ದೂರದಲ್ಲಿರುವಂತೆ ಭಕ್ತರಿಗೆ ಅನುಮಾನ ಬಂದು ಹಿಂತಿರುಗಿ ನೋಡುತ್ತಾರೆ. ಆಗ ಮಲ್ಲಯ್ಯ ಊರು ೨ ಕು.ಮೀ. ದೂರದಲ್ಲಿರುವಂತೆ ಗುಡ್ಡದಲ್ಲಿ ಸ್ಥಾಪನೆಯಾಗುತ್ತಾನೆ.[೨]

ಮತ್ತೊಂದು ಐತಿಹ್ಯ ಅಗ್ರಹಾರದ ವಾಲ್ಮಿಕರಾದ ಇಬ್ಬರು ಸಹೋದರರು ಒಂದು ದಿನ ಬೇಟೆಯಾಡಲು ತೆರಳುತ್ತಾರೆ. ಅವರಲ್ಲಿ ದೊಡ್ಡವನು ಜಾಪಾಳ ಈರಣ್ಣ, ತಮ್ಮ ಕಾಂಚ ಈರಣ್ಣ ಇವರು ಮುಂಜಾನೆಯಿಂದ ಭೇಟೆಯನ್ನು ಪ್ರಾರಂಭಿಸಿ ಕಾಡುಮೇಡಗಳನ್ನು ಸುತ್ತಾಡಿದರು. ಮಧ್ಯಹ್ನಾವಾದರೂ ಒಂದು ಬೇಟೆಯೂ ದೊರೆಯಲಿಲ್ಲವಂತೆ. ನಂತರ ಬಿಸಿಲಿನಿಂದ ಧಣಿದಂತ ಅವರು ನೀರನ್ನು ಕುಡಿಯಲೆಂದು ಹೊರಟರು ಬಿಳಿಕಲ್ಲು ಎಂಬ ಗ್ರಾಮದ ಊರ ಹೊರಗಿನ ಬಾವಿಯತ್ತಿರ ಬಂದರು. ಆಗ ನೀರನ್ನು ಕುಡಿದು ಸ್ವಲ್ಪ ಸಮಯ ಧಣಿವನ್ನು ತಣಿಸಿಕೊಳ್ಳಲು ಬಾವಿಯ ಪಕ್ಕದ ಕಟ್ಟೆಯಮೇಲೆ ಕುಳಿತರು.

ಅದೇ ಸಮಯಕ್ಕೆ ಆ ದಾರಿಗುಂಟ ಇನ್ನಿಬ್ಬರು ಸಹೋದರರು ವರವಜ್ರಗಳ ವ್ಯಾಪಾರಕ್ಕೆಂದು ತೆರಳುತ್ತಿರುವಾಗ ಈ ಬೇಟೆಗಾರ ಸಹೋದರರನ್ನು ನೋಡಿ ಹೆದರಿಕೊಂಡು ತಮ್ಮ ತಮ್ಮಲ್ಲಿಯೇ ಮಾತನಾಡಿಕೊಂಡರು.

ತಮ್ಮ:- ಅಣ್ಣ ನಮ್ಮ ಘಂಟಿನಲ್ಲಿ ವರವಜ್ರಗಳು ಇವೆ ಎಂದು ನಿಜ ಹೇಳವುದು ಬೇಡ ಬದಲಾಗಿ ಹತ್ತಿಕಾಳು ಮಾರಲು ಹೊರಟಿದ್ದೇವೆ ಎಂದು ಹೇಳೋಣ.

ಅಣ್ಣ:- ಸುಳ್ಳು ಯಾಕೆ ಹೇಳಬೇಕು ನಿಜವೇ ಹೇಳೋಣ.

ತಮ್ಮ:- ನಿಜ ಹೇಳಿದರೆ ನಮ್ಮಲ್ಲಿರುವ ವರವಜ್ರಗಳನ್ನು ಕಸಿದುಕೊಂಡು ಹೋಗಬಹುದು ಆಗ ಏನುಮಾಡುವುದು. ಅದಕ್ಕೆ ಹತ್ತಿಕಾಳು ಎಂದು ಸುಳ್ಳು ಹೇಳೋಣ ಎಂದನು.

ಅಣ್ಣ:- ಆಗಾದರೆಸರಿ, ಎಂದನು.

ಹೀಗೆ ಈ ಸಹೋದರರು ಮಾತನಾಡಿಕೊಂಡು ಬಾವಿಯ ನೀರನ್ನು ಕುಡಿದು ತಾವಾಗಿಯೇ ಬಂದು ಕಟ್ಟೆಯ ಮೇಲೆ ಕುಳಿತು ಇಬ್ಬರು ಬೇಟೆಗಾರರನ್ನು ಮಾತನಾಡಿಸುತ್ತಾ ಕೊನೆಯಲ್ಲಿ ತಾವು ಹತ್ತಿಕಾಳು ಮಾರಲು ಹೋಗುತ್ತಿದ್ದೇವೆ ಎಂದು ಹೇಳುತ್ತಾರೆ. ಆ ಮಾತಿಗೆ ಪ್ರತಿಯುತ್ತರವಾಗಿ ಜಾಪ ಈರಣ್ಣ ಮತ್ತು ಕಾಂಚ ಈರಣ್ಣ ಮುಗುಳುನಗುತ್ತಾ ಹೌದೇ ಸರಿ ನೀವು ಹೇಳಿದಂತೆ ಹತ್ತಿಕಾಳೇ ಆಗಲಿ ಬಿಡು ಎಂದು ಹೇಳುತ್ತಾರೆ. ಈ ಸಂಭಾಷಣೆಯೊಂದಿಗೆ ಮಾತು ಮುಗಿಸಿ ಪುನಃ ತಮ್ಮ ಪ್ರಯಾಣವನ್ನು ತಮ್ಮ ತಮ್ಮ ಕಾರ್ಯಗಳ ಕಡೆ ಸಾಗಿಸುತ್ತಾರೆ.

ಸ್ವಲ್ಪ ಮುಂದೆ ಸಾಗಿದ ಈ ವ್ಯಾಪಾರಿ ಸಹೋದರರು ತಾವು ತಂದ ಮೂಟೆಯನ್ನು ಅನುಮಾನದಿಂದ ಪರೀಕ್ಷಿಸಲು ಮುಂದಾಗುತ್ತಾರೆ. ಅವರ ಅನುಮಾನದಂತೆ ಆ ಮೂಟೆಯಲ್ಲಿರುವ ವರವಜ್ರಗಳು ಹತ್ತಿಕಾಳುಗಳಾಗಿರುವುದರಿಂದ ಆಶ್ಚರ್ಯಗೊಂಡು ತಮ್ಮ ತಪ್ಪಿನ ಅರಿವಾಗಿ ಆ ಭೇಟೆಗಾರ ಸಹೋದರರೆ ಇದಕ್ಕೆಲ್ಲ ಕಾರಣ. ಅವರನ್ನು ಪುನಃ ಬೇಟಿ ಮಾಡಿ ನಮ್ಮ ತಪ್ಪನ್ನು ಮನ್ನಿಸಿ ಪುನಃ ಯತಾಸ್ಥಿತಿಗೆ ನಮ್ಮ ಮೂಟೆಗಳಾಗುವಂತೆ ಕೇಳೋಣ ಎಂದು ಮೊದಲಿನ ಸ್ಥಳದ ಕಡೆ ತೆರಳುತ್ತಾರೆ. ಆಗ ಆ ಸ್ಥಳದಲ್ಲಿ ಅವರಿಲ್ಲದಿರುವುದನ್ನು ತಿಳಿದು ಅವರು ಪುನಃ ಇದೇ ಸ್ಥಳಕ್ಕೆ ಬರುತ್ತಾರೆ ಎಂಬ ನಂಬಿಕೆಯಿಂದ ಅಲ್ಲಿಯೇ ಕಾಯುತ್ತಾ ಕುಳಿತಿರುತ್ತಾರೆ.

ಅವರ ಊಹೆಯಂತೆ ಬೇಟೆಗೆ ಹೋದ ಅಣ್ಣತಮ್ಮಂದಿರು ಅದೇ ಸ್ಥಳಕ್ಕೆ ತಿರುಗಿ ಬಂದರು. ನಂತರ ವ್ಯಪಾರಿ ಅಣ್ಣತಮ್ಮಂದಿರು ನಾವುಗಳು ವರವಜ್ರಗಳ ವ್ಯಪಾರ ಮಾಡಲು ಬಂದವರು ನಿಮ್ಮನ್ನು ನೋಡಿ ಎದರಿ ಹತ್ತಿಕಾಳು ಎಂದು ಸುಳ್ಳು ಹೇಳಿದೆವು ಆದ್ದರಿಂದ ನಮ್ಮ ಹತ್ತಿರ ಇದ್ದ ವರವಜ್ರಗಳು ಹತ್ತಿಕಾಳು ಹಾಗಿವೆ ಅವುಗಳನ್ನು ಪುನಃ ಯತಾವತ್ತಾಗಿ ವರವಜ್ರಗಳಾಗುವಂತೆ ಮಾಡಿಕೊಡಿ ನೀವು ಹೇಳಿದಂತೆ ನಾವು ಮಾಡುತ್ತೇವೆ. ನಮ್ಮದು ತಪ್ಪಾಗಿದೆ ಎಂದು ಕ್ಷಮೆಯನ್ನು ಕೇಳುತ್ತಾರೆ. ಆಗ ಜಾಪ ಈರಣ್ಣ ಮತ್ತು ಕಾಂಚ ಈರಣ್ಣ ಸರಿ ಆದರೆ ಒಂದು ಶರತ್ತು ಹಾಕಿದರು. ಅದೇನೆಂದರೆ ನೀವು ತಂದಂತಹ ವರವಜ್ರಗಳನ್ನು ಒಂದು ಕತ್ತೆಯಮೇಲೆ ಮಾರಿ ಬಂದ ಹಣದಿಂದ ಒಂದು ದೇವಸ್ಥಾನ ಕಟ್ಟಿಸಬೇಕು. ಒಂದು ಕತ್ತೆಯಮೇಲಿನ ಸಂಪತ್ತನ್ನು ಮಾರಿ ಗುಡಿ ಕಟ್ಟಿಸಿದರೆ ಮುಂದೆ ಆ ಸಂಪತ್ತು ೧೦ ಕತ್ತೆಗಳಷ್ಟು ವರವಜ್ರಗಳಾಗಬಹುದು ಎಂದು ಆಶಿರ್ವಾದ ಮಾಡುತ್ತಾರೆ.

ಆ ಸಹೋದರರು ನಿಮ್ಮ ಕೋರಿಕೆ ತಕ್ಕಂತೆ ನಾವು ಗುಡಿಯನ್ನು ಕಟ್ಟಿಸಿಲು ಒಪ್ಪಿದ್ದೇವೆ ಎಂದು ಹೇಳಿ ವರವಜ್ರಗಳನ್ನು ತೆಗೆದುಕೊಂಡು ಒಂದು ಕತ್ತೆಯಮೇಲೆ ಏರಿಕೊಂಡು ವ್ಯಾಪಾರಕ್ಕೆ ಹೋಗಿ ಮಾರಿಕೊಂಡು ಬಂದ ಹಣವನ್ನು ತೆಗೆದುಕೊಂಡು ಬಂದು ಇಲ್ಲಿ ಮೊದಲು ಒಂದು ಗೋಡೆಯನ್ನು ಕಟ್ಟಬೇಕೆಂದು ಹೇಳಿದರು ಅದರಂತೆ ಒಂದು ದಿನದಲ್ಲಿ ಕಟ್ಟಿದರು ಸಂಜೆ ಕಟ್ಟುವುದೆಲ್ಲ ಮುಗಿದನಂತರ ಕೈಗಳನ್ನು ತೊಳೆದುಕೊಂಡು ತಿರುಗಿನೋಡಿದರೆ ಗೋಡೆ ಬಿದ್ದಿತ್ತು. ಇದೇ ರೀತಿಯಾಗಿ ೭೬ ಬಾರಿ ಗೋಡೆ ಕಟ್ಟಿದಂತೆಲ್ಲಾ ಬಿದ್ದಿತು ಇದರಿಂದ ಬೇಸತ್ತು ದೇವರನ್ನು ನೆನೆದರು. ಆಗ ಮುದಿ ವೇಷದಲ್ಲಿ ಮಲ್ಲಯ್ಯ ಬಂದು ಸುಮ್ಮನೆ ದೇವಾಲಯ ಕಟ್ಟಿದರೆ ಸಾಲದು ಈ ದೇವಾಲಯದ ಬುನಾದಿಗೆ ವರವಜ್ರಗಳನ್ನು ಮುತ್ತು ರತ್ನಗಳನ್ನು ಸುರಿಯಬೇಕು.

ನಂತರ ದೇವಸ್ಥಾನ ಕಟ್ಟಬೇಕು ಅದಕ್ಕೆ ೭ ಮಳದಂತೆ ೭೭ ಜನ ವಡ್ಡರನ್ನು ಕರೆಸಿ ಕಟ್ಟಬೇಕು ಎಂದು ಹೇಳಿದಾಗ ಇವರು ಅದೇ ರೀತಿ ವರವಜ್ರಗಳನ್ನು ಮುತ್ತುರತ್ನಗಳನ್ನು ಸುರಿದು ೭ ಮಳದಂತೆ ೭೭ ಜನ ವಡ್ಡರನ್ನು ಕರೆಸಿ ದೇವಸ್ಥಾನ ಕಟ್ಟಲು ಪ್ರಾರಂಭಿಸಿ ೭೬ ದಿನಗಳು ಕಳೆದಿರುತ್ತವೆ. ದೇವರು ತಿಳಿಸಿದಂತೆ ಒಂದೇ ದಿನದಲ್ಲಿ ದೇವಸ್ಥಾನ ಕಟ್ಟಿಸಿದರು.[೨]ದೇವಸ್ಥಾನ ಮುಗಿದ ನಂತರ ಅವರು ಕತ್ತೆಯ ಮೇಲಿನ ಸಂಪತ್ತು ೧೦ ಕತ್ತೆಗಳ ಮೇಲೆ ಸಾಗಿಸುವಷ್ಟಾಗಿತ್ತು. ಎಂದು ಇಲ್ಲಿನ ಜನರು ಈ ದೇವಾಲಯದ ನಿರ್ಮಾಣದ ಬಗ್ಗೆ ಕಥೆಯನ್ನು ಹೇಳುತ್ತಾರೆ.

**ಐತಿಹಾಸಿಕ ದಾಖಲೆಗಳ ಪ್ರಕಾರ**

ಕ್ರಿ.ಶ. ೧೦೧೭ ರಲ್ಲಿ ಕಲ್ಯಾಣದ ಚಾಲುಕ್ಯ ಅರಸ ಜಗದೇಕಮಲ್ಲನ ಮಹಾಮಂಡಳೇಶ್ವರ ಇರುವ ನೊಳಂಬನು ನೊಳಂಬವಾಡಿ ೩೨ ಸಾವಿರವನ್ನು ಆಳುತ್ತಿರುವಾಗ, ಬಲ್ಲಕುಂದೆ ಮುನ್ನೂರರೊಳಗಿನ ಹಗರೆಯ ತಡಿಯ ಸಿರಿಯನೂರನ್ನು ಶ್ರೀಮತ್ ಮೈಲಾರ ದೇವರಿಗೆ ಕೊಟ್ಟಿದ್ದಾನೆ. ಶಾಸನದಲ್ಲಿ ಇಲ್ಲಿಯ ದೇವರನ್ನು ಮೈಲಾರ ದೇವರು, ಎಂದು ಕರೆಯಲಾಗಿದೆ.[೪] ಕ್ರಿ.ಶ.೧೫೩೯ ರಲ್ಲಿ ವಿಜಯನಗರ ಅರಸ ಅಚ್ಚುತರಾಯನಿಗೆ ಪುಣ್ಯವಾಗಬೇಕೆಂದು ಪಯಜರಯ್ಯನು ಹರವಿನ ದೇವರ ನೈವಿದ್ಯಕ್ಕೆ ಬಿರಾಡ ಸಹಿತ ಕೆಲವು ದಾನಗಳನ್ನು ಮಾಡಿದ್ದಾನೆ.[೫] ಕ್ರಿ.ಶ ೧೭೦೧ ರಂದು ಮಹಾರಾಜ ಭೀಮಸಿಂಗ ಹೆಗಡೆ ಎಂಬುವನು ಹರವಿನ ಲಿಂಗಪ್ಪಗೆ ಕಲ್ಲು ದ್ವಾರವನ್ನು ಕಟ್ಟಿಸದ್ದಾನೆ.[೬] ಎನ್ನುವ ಉಲ್ಲೇಖವಿದೆ. ಈ ದೇವಾಲಯದ ಕುರಿತು ಹೊಳಗುಂದ ಗ್ರಾಮದ ಭಕ್ತರಲ್ಲಿ ಕಂಚಿನ ಲೋಹದ ಪಲಕವಿದೆ.ಇದು ಅಪ್ರಕಟಿತವಾದ ಶಾಸನವಗಿದ್ದು, ಇದರಲ್ಲಿ ಉಲ್ಲೇಖಗೊಂಡಿರುವಂತೆ ಆನೆಗುಂದಿಯ ಒಡೆಯ ರಮರಾಜ (ಅಳಿಯ ರಾಮರಾಯ) ನ ಕಾಲದಲ್ಲಿ ದೇವಾಲಯದ ಇತರೆ ಭಾಗಗಳನ್ನು ಕಟ್ಟಲಾಯಿತೆಂದು ಮತ್ತು ದಾನದತ್ತಿಗಳನ್ನು ನೀಡಿದರ ಬಗ್ಗೆ ತಿಳಿಸುತ್ತದೆ. ಶಾಸನಗಳಲ್ಲಿ ಇಲ್ಲಿಯ ದೇವರನ್ನು ಮೈಲಾರ ದೇವರು, ಹರವಿನ ದೇವರು ಮತ್ತು ಹರವಿನ ಲಿಂಗಪ್ಪನೆಂದು ಕರೆಯಲಾಗಿದೆ.

ಹೀಗೆ ೧೧ನೇ ಶತಮಾನದಿಂದಲೂ ನಿರಂತರವಾಗಿ ದಾನ-ದತ್ತಿಗಳನ್ನು ನೀಡುವುದರ ಬಗೆಗೆ ಮತ್ತು ದೇವಾಲಯದ ಇತರ ಭಾಗಗಳನ್ನು ಸಹ ನಿರ್ಮಿಸಿರುವುದರ ಬಗ್ಗೆ ತಿಳಿಯುತ್ತದೆ.

ಎಂ.ಬಿ. ನೇಗಿನಹಾಳ, ಎಫ್.ಟಿ. ಹಳ್ಳಿಕೇರಿ, ಡಾ. ಮಹದೇವ ಸಿ, ನಾಗರಾಜ ಹೊಸೂರಕರ್ ಮೊದಲಾದವರು ಹಿರೇ ಮೈಲಾರ ಕ್ಷೇತ್ರವೇ ಪ್ರಾಚೀನ ವೆಂದು ತಿಳಿಸಿದ್ದಾರೆ. ಆದರೆ ಐತಿಹಾಸಿಕ ದಾಖಲೆಗಳ ಪ್ರಕಾರತೆಕ್ಕಲಕೋಟೆಯ ಮೈಲಾರ ದೇವರು ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶದ ಇತರ ಕ್ಷೇತ್ರಗಳಿಗಿಂತಲೂ ಪ್ರಾಚೀನವಾಗಿದೆ ಎಂದು ತರ್ಕಿಸಲಾಗಿದೆ.

### ೩.೨ ವಾಸ್ತುಶಿಲ್ಪ:-

ಗಟ್ಟಿಯಾದ ವಸ್ತುವಿನಿಂದ ವಾಸ್ತುವಿನ (ನಿವೇಶನ) ಮೇಲೆ ರಚನೆಗೊಂಡ ಎಲ್ಲ ವಾಸಯೋಗ್ಯ ರಚನೆಗಳೂ ವಾಸ್ತುರಚನೆ ಎನಿಸಿಕೊಳ್ಳುತ್ತವೆ. ಈ ರೀತಿಯ ವಾಸ್ತುರಚನೆಗಳು ಮಾನವ ನಾಗರಿಕತೆಯ ಮಾನದಂಡ ಎಂದರೆ ತಪ್ಪಾಗಲಾರದು. ಕಾಲಾಂತರದಲ್ಲಿ ಮಾನವನ ಬೌದ್ಧಿಕ ವಿಕಸನದ ರೀತಿಯ ಖಚಿತತೆಯ ಪ್ರತ್ಯಕ್ಷ ಸಾಕ್ಷಿಗಳೆಂದು ಹೇಳಬಹುದು.[೭]

ದೇವಾಲಯಗಳ ವಾಸ್ತುಶಿಲ್ಪಗಳಲ್ಲಿ ಹೆಚ್ಚು ಪ್ರಚಲಿತದಲ್ಲಿರುವ ಹಾಗೂ ವಾಸ್ತು ಗ್ರಂಥಗಳಲ್ಲಿ ಹೆಚ್ಚು ಮನ್ನಣೆ ಪಡೆದಿರುವ ಪ್ರಮುಖ ವಾಸ್ತುಶೈಲಿಗಳು ಮೂರು. ಇವು ನಾಗರ, ದ್ರಾವಿಡ, ವೇಸರ ಶೈಲಿಗಳು. ಈ ಶೈಲಿಗಳನ್ನು ಕರ್ನಾಟಕದ ಶಾಸನಗಳು ಹೆಸರಿಸಿವೆ. ಚಿರಪರಿಚಿತವಾಗಿರುವ ಈ ಶೈಲಿಗಳನ್ನು ಕರಾರುವಕ್ಕಾಗಿ ಗುರುತಿಸಲು ನಿರಂತರವಾಗಿ ಪ್ರಯತ್ನಗಳು ನಡೆದಿವೆ. ವಾಸ್ತುಶಿಲ್ಪ ನಿರ್ಮಾಣದಲ್ಲಿ ಸಂಸ್ಕೃತಿಯ ಆಧ್ಯಾತ್ಮಿಕ ಚಿಂತನೆ ಅಥವಾ ಧಾರ್ಮಿಕ ಮೂಲ ಕಲ್ಪನೆಗೆ ಅಧಿಕ ಪ್ರಾಮುಖ್ಯತೆ ಇದ್ದರೂ, ಅದಕ್ಕೆ ವಿರುದ್ಧವಾದ ಕಾಮ, ಕರ್ಮಾಚರಣೆ ಮತ್ತು ಲೌಕಿಕ ಸುಖಗಳನ್ನು ಅಳವಡಿಸಲಾಗಿದೆ. ಶಿಲ್ಪಕಲೆಯು ಸಂಸ್ಕೃತಿಯ ಉಗಮ ಮತ್ತು ವಿಕಾಸಗಳಿಗೆ ಮೂಲವಾಗಿದ್ದು, ಕಾಲಾನುಕ್ರಮದ ಬೆಳವಣಿಗೆಯಲ್ಲಿ ದೇವಾಲಯ, ಮೂರ್ತಿಶಿಲ್ಪಗಳ ಶೈಲಿ, ಸನ್ನಿವೇಶ, ಸಂದರ್ಭಗಳನ್ನು ಒಡಮೂಡಿಸಿರುವುದು ಕಂಡುಬರುತ್ತದೆ. ಆಧ್ಯಾತ್ಮಿಕ ಹಾಗೂ ಸೌಂದರ್ಯಗಳನ್ನು ಲಕ್ಷದಲ್ಲಿಟ್ಟುಕೊಂಡು ಶಿಲ್ಪಿ ತನ್ನ ಕಲ್ಪನೆ ಮತ್ತು ಆದರ್ಶ ಭಾವನೆಗಳನ್ನು ಇವುಗಳಲ್ಲಿ ಸೂಕ್ಷ್ಮವಾಗಿ ಅಭಿವ್ಯಕ್ತಿಸಿದ್ದಾನೆ.[೮]

ಮಾನಸಾರ, ಮಯಮತ, ಕಶ್ಯಪ, ವೈಖಾನಸ, ವಿಶ್ವಕರ್ಮೀಯ, ಇನ್ನೂ ಮೊದಲಾದ ಶಿಲ್ಪಶಾಸ್ತ್ರ ಗ್ರಂಥಗಳಲ್ಲಿ ದೇವಾಲಯಗಳ ನಿರ್ಮಾಣ ಕುರಿತು ಅನೇಕ ವಿವರಗಳು ದೊರೆಯುತ್ತವೆ. ದುರಾದೃಷ್ಟವಶಾತ್ ಈ ಎಲ್ಲಾ ಗ್ರಂಥಗಳು ಪೂರ್ಣಪ್ರಮಾಣದಲ್ಲಿ ದೊರೆಯದೇ ಇದ್ದುದ್ದು ದೇವಾಲಯಗಳ ಬಗ್ಗೆ ಇನ್ನೂ ಹೆಚ್ಚಿನ ವಿವರಗಳು ತಿಳಿದುಕೊಳ್ಳಲು ಸಾಧ್ಯವಾಗುತ್ತಿಲ್ಲ.[೯] ಆದರೂ ಮಾನಸಾರ ಗ್ರಂಥವು ದೇವಾಲಯಗಳ ನಿರ್ಮಾಣದ ಬಗ್ಗೆ ಹೆಚ್ಚಿನ ವಿವರಗಳನ್ನು ತಿಳಿಸುತ್ತದೆ. ಈ ಗ್ರಂಥವು ಒಟ್ಟು ೫೮ ಅಧ್ಯಾಯಗಳನ್ನು ಹೊಂದಿದೆ, ಪ್ರತಿ ಅಧ್ಯಾಯದಲ್ಲೂ ದೇವಾಲಯಗಳ ನಿರ್ಮಾಣದ ಉದ್ದೇಶ, ಶಿಲ್ಪಿಗೆ ಇರಬೇಕಾದ ಅರ್ಹತೆಗಳು, ದೇವಾಲಯ ನಿರ್ಮಾಣ ಯೋಗ್ಯಸ್ಥಳ, ದೇವಾಲಯಗಳನ್ನು ಗ್ರಾಮ, ನಗರಗಳ ಯಾವ ಭಾಗದಲ್ಲಿ, ಯಾವ ದಿಕ್ಕಿನಲ್ಲಿ ಕಟ್ಟಬೇಕು, ತಳವಿನ್ಯಾಸ, ಅಧಿಷ್ಠಾನ, ಶಿಖರ, ದೇವರುಗಳ ವಿಗ್ರಹಗಳ ಪ್ರತಿಷ್ಠಾಪನೆ, ಪರಿವಾರ ದೇವರುಗಳ ಪ್ರತಿಷ್ಠಾಪನೆ ಇನ್ನೂ ಮೊದಲಾದ ವಿವರಗಳನ್ನು ತಿಳಿಸುತ್ತದೆ.[೧೦]

ಮಯಮತ ಗ್ರಂಥವೂ ಸಹ ಮಾನಸಾರ ಕೃತಿಯಲ್ಲಿರುವ ವಿವರಗಳನ್ನು ತಿಳಿಸುತ್ತದೆ. ದೇವಾಲಯದ ಕಟ್ಟಡವನ್ನು ಕಟ್ಟಲು ಪ್ರಾರಂಭಿಸುವಾಗ ವಾಸ್ತುಪುರುಷನನ್ನು ತೃಪ್ತಿಪಡಿಸಲು ಮಾಡಬೇಕಾದ ಸಂಸ್ಕಾರ, ವಿಧಿ–ವಿಧಾನಗಳನ್ನು ತಿಳಿಸುತ್ತದೆ. ದೇವಾಲಯದ ಉಪಪೀಠ, ಅಧಿಷ್ಠಾನ, ಭಿತ್ತಿ, ಪ್ರಸ್ತರ, ಕಟ್ಟಡದ ಮೇಲ್ಭಾವಣಿ, ದೇವಾಲಯದ ಶಿಖರ, ಪ್ರಾಕಾರ, ಮಂಟಪಗಳು, ಬಲಿಪೀಠ ಇನ್ನೂ ಮುತಾಂದ ವಿವರಗಳನ್ನು ತಿಳಿಸುತ್ತದೆ. ಈ ಗ್ರಂಥದ ಕರ್ತೃ 'ಮಯ' ಎಂಬುವವರು ಆಗಿರಬಹುದೆಂದು ಹೇಳಲಾಗುತ್ತದೆ.[೧೧]

ಕಶ್ಯಪ ಋಷಿಯಿಂದ ರಚನೆಗೊಂಡ 'ಕಶ್ಯಪ' ಕೃತಿಯು ಗದ್ಯ ರೂಪದಲ್ಲಿದೆ, ಹೆಚ್ಚು ಕಡಿಮೆ ಈ ಮೇಲೆ ವಿವರಿಸಿದ ವಿಷಯಗಳನ್ನೇ ವಿವರಿಸುತ್ತದೆ. ದೇವಾಲಯ ನಿರ್ಮಾಣ ಯೋಗ್ಯಸ್ಥಳ, ದೇವಾಲಯ ನಿರ್ಮಾಣದ ಪ್ರಾರಂಭದಲ್ಲಿ ಮಾಡಬೇಕಾದ ಸಂಸ್ಕಾರಗಳು, ದ್ವಾರಗಳು, ಅಲಂಕರಣೆಗಳು, ದೇವಕೊಷ್ಟಗಳು, ಶಿಖರ, ವಿಮಾನ, ಪ್ರಮುಖ ದೇವಾನುದೇವತೆಗಳ ವಿಗ್ರಹಗಳು ಇತ್ಯಾದಿ ವಿವರಗಳನ್ನು ತಿಳಿಸುತ್ತದೆ.

ವೈಖಾನಸ ಋಷಿಯಿಂದ ರಚಿಸಲ್ಪಟ್ಟ 'ವೈಖಾನಸ' ಗ್ರಂಥವು ದೇವಾಲಯಗಳು ಗ್ರಾಮ, ನಗರ, ಪಟ್ಟಣಗಳನ್ನು ಕಟ್ಟುವ ಮೊದಲು ಮಾಡಬೇಕಾದ ಸಂಸ್ಕಾರ ವಿಧಾನಗಳನ್ನೇ ವಿಶೇಷವಾಗಿ ಈ ಗ್ರಂಥವು ತಿಳಿಸುತ್ತದೆ.[೧೨] ಸಕಲಾಧಿಕಾರ ಇನ್ನೂ ಮುಂತಾದ ಶಿಲ್ಪಶಾಸ್ತ್ರ ಗ್ರಂಥಗಳು ಸಹ ದೇವಾಲಯ ನಿರ್ಮಾಣ ಮತ್ತಿತರ ವಿವರಗಳನ್ನು ತಿಳಿಸುತ್ತದೆ. ಹೀಗೆ ಈ ಗ್ರಂಥಗಳಲ್ಲಿ ಉಲ್ಲೇಖಗೊಂಡಿರುವ ಅಂಶಗಳ ಹಿನ್ನಲೆಯಲ್ಲಿ ದೇವಾಲಯಗಳ ಉಗಮ, ನಿರ್ಮಾಣ ಮತ್ತು ವಿಕಾಸವನ್ನು ಈ ಮುಂದಿನಂತೆ ನೋಡಬಹುದು.

## ವರವಿನ ಮಲ್ಲೇಶ್ವರ ದೇವಾಲಯ

ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟೆ ಗ್ರಾಮದ ಪೂರ್ವಕ್ಕೆ ೨ ಕಿ.ಮೀ ದೂರದಲ್ಲಿ ಒಂದು ಬೆಟ್ಟವಿದೆ. ಈ ಬೆಟ್ಟವನ್ನು ಸ್ಥಳೀಯರು ಮಲ್ಲಯ್ಯನ ಗುಡ್ಡವೆಂದು ಕರೆಯುತ್ತಾರೆ. ಈ ಗುಡ್ಡದ ಮೇಲೆ ನಿರ್ಮಿಸಲಾದ ದೇವಾಲಯವೇ ಮಲ್ಲಯ್ಯನ ದೇವಾಲಯ. ಈ ದೇವಾಲಯವು ಅನೇಕ ಅರಸರಿಂದ ನಿರ್ಮಿಸಲ್ಪಟ್ಟಿದ್ದು, ಅದರಲ್ಲಿ ಮುಖ್ಯವಾಗಿ ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿ ಮತ್ತು ವಿಜಯನಗರ ಕಾಲದ ಶೈಲಿಯಲ್ಲಿ ನಿರ್ಮಿಸಲಾಗಿದೆ. ಈ ದೇವಾಲಯವು ಪಶ್ಚಿಮಾಭಿಮುಖವಾಗಿದ್ದು, ಪೂರ್ವ ಮತ್ತು ದಕ್ಷಿಣ ಭಾಗದಲ್ಲಿ ದ್ವಾರ ಬಾಗಿಲುಗಳಿದ್ದು ವಿಶಾಲವಾದ ಪರಾಂಗಣ ಹೊಂದಿದೆ ಮತ್ತು ವಿಶಾಲವಾದ ಪ್ರಕಾರ, ಪ್ರಕಾರದಲ್ಲಿ ಮಹಾದ್ವಾರ ಗೋಪುರಗಳನ್ನು ಒಳಗೊಂಡ ಈ ದೇವಾಲಯವು ಗರ್ಭಗೃಹ, ಪ್ರದಕ್ಷಿಣಾಪಥ, ಸಭಾ ಮಂಟಪ, ಮಹಾ ಮಂಟಪ ಹಾಗೂ ಉಪ ದೇವಾಲಯಗಳನ್ನು ಒಳಗೊಂಡಿದೆ.[೧೩]

ಈ ದೇವಾಲಯವದ ಗರ್ಭಗೃಹ ೮ ಅಡಿ ಉದ್ದ ೮ ಅಡಿ ಅಗಲವಿದೆ. ಗರ್ಭಗೃಹದಲ್ಲಿ ಕಪ್ಪು ಗ್ರಾನೈಟ್ ಶಿಲೆಯ ೩.೫ ಅಡಿ ಎತ್ತರವಿರುವ ಸುಂದರವಾದ ಮಲ್ಲಯ್ಯನ ಶಿಲ್ಪವಿದೆ. ಮಲ್ಲಯ್ಯನು ತನ್ನ ನಾಲ್ಕು ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ ಮತ್ತು ಭಿಕ್ಷಾಪಾತ್ರೆಗಳನ್ನು ಹಿಡಿದಿರುವನು. ಕೆಳಗಡೆ ಎಡಬದಿಯಲ್ಲಿ ಬೃಂಗಿಯ ಶಿಲ್ಪವಿದೆ.[೧೪] ಗರ್ಭಗೃಹದ ಬಾಗಿಲುವಾಡದ ಪೇದ್ಯ ಭಾಗದಲ್ಲಿ ಎರಡೂಕಡೆ

ಪೂರ್ಣಕುಂಬದ ಚಿತ್ರವಿದೆ. ಅದರ ಮುಂಭಾಗವು ಆಧುನಿಕವಾಗಿ ನಿರ್ಮಾಣವಾಗಿದ್ದು, ಬಿಳುಪಿನ ಗ್ರಾನೈಟ್ ಶಿಲೆಯಲ್ಲಿ ಭಿತ್ತಿ ಮತ್ತು ನೆಲಹಾಸುಗಳನ್ನು ಹಾಸಲಾಗಿದ್ದು, ಸುತ್ತಲೂ ಪ್ರದಕ್ಷಿಣಾ ಪಥವಿದ್ದು, ತೆರೆದ ಸುಖನಾಸಿ ಮಂಟಪವಿದೆ.

ಗರ್ಭಗೃಹದ ಎಡ ಮತ್ತು ಬಲಬದಿಯಲ್ಲಿ ೨ ಚಿಕ್ಕ ಗರ್ಭಗೃಹಗಳಿದ್ದು ಎಡಬದಿಯ ಗರ್ಭಗೃಹದಲ್ಲಿ ಕಪ್ಪು ಗ್ರಾನೈಟ್ ಶಿಲೆಯಲ್ಲಿ ನಿರ್ಮಿಸಿದ ಗಂಗಿಮಾಳಮ್ಮನ ಶಿಲ್ಪವಿದೆ. ಈ ಶಿಲ್ಪವು ೨.೫ ಅಡಿ ಎತ್ತರವಿದೆ. ತನ್ನ ನಾಲ್ಕು ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ ಮತ್ತು ಪಾನಪಾತ್ರೆಯನ್ನು ಹಿಡಿದಿದ್ದಾಳೆ. ದ್ವಾರದಲ್ಲಿ ಶೈವದ್ವಾರಪಾಲಕರ ಶಿಲ್ಪವಿದೆ. ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವಿದ್ದು ದ್ವಾರಪಟ್ಟಿಕೆ ಸರಳತೆಯಿಂದಕೂಡಿದೆ. ಮಲ್ಲಯ್ಯನ ಬಲಭಾಗದ ಗರ್ಭಗುಡಿಯಲ್ಲಿ ಲಕ್ಷ್ಮಿಶಿಲ್ಪವಿದ್ದು (ತುಪ್ಪದಮಾಳಮ್ಮ) ಕಪ್ಪು ಗ್ರಾನೈಟ್ ಶಿಲೆಯಿಂದ ನಿರ್ಮಿಸಿದ ಮೂರ್ತಿಯಾಗಿದೆ. ದ್ವಾರದಲ್ಲಿ ಜಯವಿಜಯ ದ್ವಾರಪಾಲಕರು, ಲಲಾಟದಲ್ಲಿ ಗಜಲಕ್ಷ್ಮಿ ಚಿತ್ರವಿದೆ. ದ್ವಾರ ಪಟ್ಟಿಕೆಗಳು ಸರಳತೆಯಿಂದ ಕೂಡಿದೆ. ಸಭಾಮಂಟಪದಲ್ಲಿ ೨ ಕಂಬಗಳಿದ್ದು, ಉಬ್ಬು ಶಿಲ್ಪಗಳಿಂದ ಅಲಂಕೃತಗೊಂಡಿದೆ. ಉಬ್ಬು ಶಿಲ್ಪ ಎಂದರೆ "ಒಂದು ಪಟ್ಟಿಕೆಯಂತಿರುವ ಶಿಲೆಯಲ್ಲಿ ಶಿಲೆಗೆ ಹೊಂದಿಕೊಂಡೇ ಇದ್ದು ರೇಖೆಗಳನುಸಾರವಾಗಿ ದೇಹದ ಕೆಲವು ಭಾಗಮಾತ್ರವೇ ಶಿಲೆಯಿಂದ ಎದ್ದುಬಂದಿರುವಂತಹ ಶಿಲ್ಪಗಳಿಗೆ ಉಬ್ಬುಶಿಲ್ಪ" ಎನ್ನುತ್ತಾರೆ.[೧]

ಸಭಾಮಂಟಪದಲ್ಲಿ ಎಡಬದಿಯ ಮೂಲೆಯೊಂದರ ಚಿಕ್ಕ ಕಟ್ಟೆಯ ಮೇಲೆ ಆತ್ಮ ಬಲಿದಾನದ ಸ್ಮಾರಕಗಳು ಇವೆ. ಮಲ್ಲಯ್ಯನ ಗರ್ಭಗೃಹದ ಹಿಂಭಾಗದ ಎಡಮೂಲೆಯಲ್ಲಿ ಕಬ್ಬಿಣದ ತ್ರಿಶೂಲವಿದೆ. ಇದು ಸುಮಾರು ೬ ಅಡಿ ಎತ್ತರವಿದ್ದು, ತಲೆಯ ಮಧ್ಯಭಾಗದಲ್ಲಿ ಮುಖವಾಡವಿದೆ. ಈ ತ್ರಿಶೂಲಕ್ಕೆ ಕೊಂತಮಯ್ಯತಾತ ಎಂದು ಹೆಸರಿಟ್ಟಿದ್ದಾರೆ. ಇದಕ್ಕೆ ಒಂದು ಚಿಕ್ಕ ಕಥೆ ಇದೆ. ಕೊಂತಮಯ್ಯ ತಾತನ ತಂಗಿ ಗಂಗಿಮಾಳಮ್ಮ ಗಂಡನೊಂದಿಗೆ ಜಗಳವಾಡಿ ತವರಿಗೆ ಬಂದಿರುತ್ತಾಳೆ. ಅಣ್ಣನು ತಂಗಿಯನ್ನು ಗಂಡನಮನೆಗೆ ಬಿಡಲು ಅಗಿ ಹುಣ್ಣಿಮೆಯ ದಿನದಂದು ಬಂದಿರುತ್ತಾನೆ. ಮಲ್ಲಯ್ಯ ಇದನ್ನು ಒಪ್ಪುವುದಿಲ್ಲ ಆಗ ಕೊಂತಮಯ್ಯ ತಾತ ನಮ್ಮ ಹೆಣ್ಣುಮಗಳು ನಿಮ್ಮ ಅನುಮತಿ ಇಲ್ಲದೆ ತವರಿಗೆ ಬಂದಿದ್ದು ತಪ್ಪಾಗಿದೆ ಎಂದು ಬೇಡಿಕೊಂಡು ತನ್ನ ಶಿರವನ್ನು ಬಲಿನೀಡುತ್ತಾನೆ. ಆದ್ದರಿಂದ ತ್ರಿಶೂಲಕ್ಕೆ ಕೊಂತಮಯ್ಯ ತಾತ ಎಂದು ಹೆಸರಿಟ್ಟು ಅದಕ್ಕೆ ಮುಖವಾಡವನ್ನು ಇಟ್ಟಿದ್ದಾರೆ. ಅಲ್ಲದೆ ಈ ತ್ರಿಶೂಲದ ಬಗ್ಗೆ ಆಚರಣೆ ಜಾರಿಯಲ್ಲಿದೆ. ಅದೇನೆಂದರೆ ಅಗಿ ಹುಣ್ಣಿಮೆಯ ದಿನದಂದು ಹೊಳಗುಂದದಿಂದ ಬಂದ ಪೂಜಾರಿಗಳು ಈ ತ್ರಿಶೂಲವನ್ನು ತೆಗೆದುಕೊಂಡು ದೇವಸ್ಥಾನದ ದಕ್ಷಿಣ ಭಾಗದಲ್ಲಿರುವ ಈರಣ್ಣ ಒಂಡದಲ್ಲಿ ಈ ತ್ರಿಶೂಲಕ್ಕೆ ಸ್ನಾನವನ್ನು ಮಾಡಿಸಿ ಅದಕ್ಕೆ ಅಲಂಕೃತ ಪೂಜಾ ಸಾಮಾನುಗಳನ್ನು. ಒಡವೆಗಳನ್ನು ಹಾಕಿ ಪೂಜೆ ಮಾಡಿದ ಮೇಲೆ ಆ ದಿನದಂದು ಇದಕ್ಕೆ ಅಪಾರ ದೈವಶಕ್ತಿ ಬರುತ್ತದೆ. ಎನ್ನುವುದು ಅಲ್ಲಿನ ಜನರ ನಂಬಿಕೆಯಾಗಿದೆ.

ಅಂತರಾಳದ ದ್ವಾರವು ಅಲಂಕಾರದಿಂದ ಕೂಡಿದ್ದು ಪೇದ್ಯ ಭಾಗದಲ್ಲಿ ೨ ಬದಿಯಲ್ಲಿ ಶೈವದ್ವಾರಪಾಲಕರ ಚಿತ್ರಣವಿದೆ. ಲಲಾಟದಲ್ಲಿ ಲಕ್ಷ್ಮಿಯ ಚಿತ್ರವಿದೆ. ದ್ವಾರಪಟ್ಟಿಕೆ ೫ ಭಾಗಗಳಿಂದ ಕೂಡಿದ್ದು ಹೂ ಬಳ್ಳಿಗಳ ಅಲಂಕರವನ್ನು ಹೊಂದಿದೆ. ಇದರ ಮುಂಭಾಗದಲ್ಲಿ ೧೬ ಕಂಬಗಳನ್ನೊಳಗೊಂಡ ಮಹಾಮಂಟಪವಿದೆ. ಇದಕ್ಕೆ ಮದರಂಗಿ ಮಂಟಪವೆಂತಲೂ ಕರೆಯುತ್ತಾರೆ.

ಈ ಮಂಟಪವನ್ನು ವಿಜಯನಗರ ಕಾಲದಲ್ಲಿ ನಿರ್ಮಿಸಲಾಗಿದೆ. ಈ ೧೬ ಕಂಬಗಳ ಮೇಲೆ ಸುಂದರವಾದ ಉಬ್ಬುಶಿಲ್ಪಗಳಿವೆ. ಅವುಗಳೆಂದರೆ ಶಿವಲಿಂಗ, ನವಿಲು ಹಾವನ್ನು ಹಿಡಿದಿರುವಚಿತ್ರ, ಮಹಿಷಮರ್ದಿನಿ, ಶಿವತಾಂಡವನೃತ್ಯ, ಗಣೇಶ, ನರ್ತನಸ್ತ್ರೀಯರು, ಕಾಳಿಂಗಮರ್ಧನ ಶಿಲ್ಪ ಉಗ್ರನರಸಿಂಹ, ಬೆಣ್ಣೆಕಳ್ಳ ಕೃಷ್ಣ, ಭಕ್ತಮಾರ್ಕಂಡೇಯ ಇನ್ನು ಮುಂತಾದ ಉಬ್ಬು ಶಿಲ್ಪಗಳನ್ನು ಕೆತ್ತಲಾಗಿದೆ.[೧೬]

ಕಂಬಗಳಮೇಲಿನ ಬೊದಿಗೆಗಳು ಕಮಲದ ಪುಷ್ಪಗಳು ಹರಳಿದ ಅಲಂಕಾರವನ್ನು ಹೊಂದಿದೆ. ಈ ಮಹಾಮಂಟಪದ ಭುವನೇಶ್ವರಿಯು ೪ ಕಂಬಗಳ ಮಧ್ಯಭಾಗದಲ್ಲಿ ಆಯಾತಾಕಾರದಲ್ಲಿ ಇದ್ದು ೫ ಪಟ್ಟಿಕೆಗಳನ್ನು ಹೊಂದಿದೆ. ಮೊದಲ ಪಟ್ಟಿಕೆಯಲ್ಲಿ ಹಲೆಗಳ ಚಿತ್ರವಿದೆ, ೨ನೇ ಪಟ್ಟಿಕೆಯಲ್ಲಿ ಹಂಸಗಳ ಸಾಲು, ೩ನೇ ಪಟ್ಟಿಕೆಯಲ್ಲಿ ನರ್ತಕಿಯರ ಶಿಲ್ಪವಿದೆ. ೪ನೇ ಪಟ್ಟಿಕೆಯಲ್ಲಿ ೪ ಮೂಲೆಯಲ್ಲಿ ಹ್ಯಾಳಿಯ ಚಿತ್ರಣ ಮತ್ತು ೫ನೇ ಪಟ್ಟಿಕೆಯಲ್ಲಿ ಹೂಬಳ್ಳಿಗಳ ಅಲಂಕಾರಹೊಂದಿದೆ. ನಡುವೆ ಬಾಳೆಗೊನೆಯಾಕಾರದ ಹೂವಿನ ಚಿತ್ರಣವಿದೆ. ಭುವನೇಶ್ವರಿಯ ಸುತ್ತಲೂ ೩ ಪಟ್ಟಿಕೆಯನ್ನು ಹೊಂದಿದ್ದು ಇದೇ ರೀತಿಯ ಚಿತ್ರಣವನ್ನು ಹೊಂದಿದೆ. ಈ ಮಂಟಮಪದಲ್ಲಿ ಮಲ್ಲಯ್ಯನ ಗರ್ಭಗುಡಿಗೆ ಅಭಿಮುಖವಾಗಿ ನಂದಿಯ ಮೂರ್ತಿ ಇದ್ದು ಇದರ ಪಕ್ಕದಲ್ಲಿ ಪಾದುಕೆಗಳು ಮತ್ತು ಹಿಂಭಾಗದಲ್ಲಿ ಪೀಠದ ಮೇಲೆ ಪಾದುಕೆಗಳು ಇವೆ ನಂದಿಯ ಬಲಭಾಗದಲ್ಲಿ ನೆಲಕ್ಕೆ ಹಾಸಿದ ಶಾಸನವಿದೆ. ಈ ಮಂಟಪಕ್ಕೆ ಪಶ್ಚಿಮ ಮತ್ತು ದಕ್ಷಿಣಕ್ಕೆ ೨ ದ್ವಾರಗಳು ಇವೆ. ದಕ್ಷಿಣ ದ್ವಾರದಿಂದ ಮಹಾಮಂಟಪಕ್ಕೆ ಪ್ರವೇಶಿಸಿದಾಗ ಎಡಭಾಗಕ್ಕೆ ಮತ್ತೊಂದು ಶಾಸನವಿದೆ. ಪಶ್ಚಿಮ ದ್ವಾರದ ಪೇದ್ಯಭಾಗದಲ್ಲಿ ಶೈವ ದ್ವಾರಪಾಲಕರು ಲಲಾಟದಲ್ಲಿ ಶಿವ ಪಾರ್ವತಿಯ ಚಿತ್ರವಿದೆ. ಬಾಗಿಲುವಾಡವು ಅನೇಕ ಪಟ್ಟಿಕೆಗಳಿಂದ ಕೂಡಿದ್ದು ಹೂ ಬಳ್ಳಿಗಳ ಅಲಂಕಾರದಿಂದ ಕೂಡಿದೆ. ಇದರ ಮುಂಭಾಗದಲ್ಲಿ ೬ ಕಂಬಗಳಿಂದ ಕೂಡಿದ ತೆರೆದ ಮಂಟಪವಿದೆ ಇದರ ಮುಂದೆ ಗರುಡ ಸ್ತಂಭವಿದ್ದು, ಮುಂದೆ ಶಿಭಾರಮಂಟಪ ಇದೆ. ಈ ದ್ವಾರದ ಮುಂದೆ ಎಡಭಾಗದಲ್ಲಿ ಅನೇಕ ಶಿಲ್ಪಗಳಿವೆ. ಅವುಗಳೆಂದರೆ ವೀರಗಲ್ಲುಗಳು, ಆತ್ಮಬಲಿದಾನ ಸ್ಮಾರಕಗಳು, ಮಹಾಸತಿಗಲ್ಲುಗಳು, ನಾಗಶಿಲ್ಪಗಳು ಯುದ್ಧಸನ್ನಿವೇಶದ ವೀರಗಲ್ಲುಗಳು ಮುಂತಾದ ಶಿಲ್ಪಗಳಿವೆ.

ಗರುಡ ಸ್ತಂಬವು ೪-೫ ಅಡಿ ಎತ್ತರವಿದ್ದು, ಪೂರ್ವಾಭಿಮುಖವಾಗಿ ಗರ್ಭಗೃಹದಲ್ಲಿರುವ ಮೂರ್ತಿಗೆ ಅಭಿಮುಖವಾಗಿರುವಂತೆ ಈ ಕಂಬದಲ್ಲಿ ಗರುಡನನ್ನು ಕೆತ್ತಲಾಗಿದೆ. ಇದರ ಸುತ್ತಳತೆ ಸುಮಾರು ೨.೫ ಅಡಿ ಹೊಂದಿದ್ದು, ೩ ರೀತಿಯ ಕೆತ್ತನೆಗಳಿಂದ ಕೂಡಿದೆ. ಕಾಂಡಭಾಗದ ಕೆಳ ಮತ್ತು ಮಧ್ಯಭಾಗ ಚೌಕಾಕೃತಿಯನ್ನು ಹೊಂದಿದೆ. ಅದರ ಮೇಲ್ಭಾಗದಲ್ಲಿ ವೃತ್ತಾಕಾರವಾಗಿದ್ದು, ಕುಂಬದ ರಚನೆಯನ್ನು ಹೊಂಧಿದೆ. ಇದರ ಮೇಲ್ಭಾಗದಲ್ಲಿ ಚೌಕಾಕೃತಿಯ ಅಭಾಕವನ್ನು ಹೊಂದಿದೆ. ೪ ದಿಕ್ಕುಗಳಲ್ಲಿಯೂ ಪುಷ್ಪರಚನೆಯನ್ನು ಹೊಂದಿದೆ.

ಇದರ ಮುಂದೆ ಇರುವ ಶಿಭಾರ ಮಂಟಪವು ೪ ಕಂಬಗಳಿಂದ ಕೂಡಿದೆ ಈ ಕಂಬಗಳ ಕೆಳಭಾಗ, ಮಧ್ಯಭಾಗ, ಮೇಲ್ಭಾಗ ಚೌಕಾಕಾರದಿಂದ ಕೂಡಿದ್ದು ಅನೇಕ ಉಬ್ಬುಶಿಲ್ಪಗಳ ಅಲಂಕಾರವನ್ನು ಹೊಂದಿದೆ. ಮಂಟಪದ ಕೆಳಭಾಗದಲ್ಲಿ ಪುಷ್ಪಗಳ ಅಲಂಕಾರವನ್ನು ಹೊಂದಿದ್ದು ಮೇಲ್ಭಾಗದಲ್ಲಿ ಗಾರೆ ಮತ್ತು ಇಟ್ಟಿಗೆಯಿಂದ ನಿರ್ಮಿಸಿದ ಶಿಖರವಿದೆ. ಇದರಲ್ಲಿ ಕೋಷ್ಟಕಗಳು, ಶಿಲ್ಪಗಳು, ಕಂಬಗಳ ಮುಂತಾದ ಅಲಂಕಾರವು ಕಂಡುಬರುತ್ತದೆ. ಕಂಬಗಳ ಮೇಲ್ಭಾಗದಲ್ಲಿ ಬರುವ ಭೋದಿಗೆಗಳು ಕಮಲದ

ಮೊಗ್ಗು ಇಳಿಬಿದ್ದಿರುವಂತೆ ಅಲಂಕಾರವನ್ನು ಹೊಂದಿದೆ. ೪ ಕಂಬಗಳ ಮಧ್ಯಭಾಗದಲ್ಲಿ ಶಿಭಾರ ಕಟ್ಟೆಯಿದೆ. ಇದರ ಮೇಲ್ಭಾದಲ್ಲಿ ತ್ರಿಶೂಲ, ಇದರ ಅಕ್ಕಪಕ್ಕ ಕುಂಬಗಳ ರಚನೆಇದೆ. ತ್ರಿಶೂಲದ ರಚನೆ ಇರುವುದರಿಂದ ಇದನ್ನು ಮಲ್ಲಯ್ಯನ ಲಾಂಛನದ ಗುರುತು ಎಂದು ತಿಳಿಯಲಾಗಿದೆ. ಶಿಭಾರ ಮಂಟಪದ ಕೇಳಭಾಗದಲ್ಲಿ ೨ ಶಿಲ್ಪಗಳು ಇವೆ. ಅಲ್ಲದೆ ಈ ಮಂಟಪದ ಮುಂದೆ ಸ್ವಲ್ಪ ಬಲಭಾಗದಲ್ಲಿ ದೀಪಸ್ತಂಬವಿದ್ದು, ಇದರ ಪಕ್ಕದಲ್ಲಿ ಒಂದು ದುಂಡಾದ ಕಲ್ಲಿನ ಮೇಲೆ ಮಧ್ಯದಲ್ಲಿ ದುಂಡಾದ ಸಣ್ಣ ಕಲ್ಲು ಇದೆ. ಇದಕ್ಕೊಂದು ಆಚರಣೆ ಇದೆ ದೇವಸ್ಥಾನಕ್ಕೆ ಬಂದ ಭಕ್ತರು ತಮ್ಮ ಇಷ್ಟಾರ್ತಗಳು ಸಿದ್ಧಿಸಲಿ ಎಂದು ಮನದಲ್ಲಿ ಮಲ್ಲಯ್ಯನ ಸ್ಮರಣೆ ಮಡಿಕೊಂಡು ಮೂರು ಬೆರಳಿನಲ್ಲಿ ಮಧ್ಯಭಾದದಲ್ಲಿರುವ ದುಂಡನೆಯ ಸಣ್ಣಕಲ್ಲನು ಎತ್ತಬೇಕು ಎತ್ತುವಾಗ ಸರಳವಾಗಿ ಎದ್ದರೆ ತಮ್ಮ ಇಷ್ಟಾರ್ತಗಳು ನೆರವೇರುತ್ತವೆ. ಒಂದುವೇಳೆ ಕಲ್ಲು ಮೇಲಕ್ಕೆ ಏಳದಿದ್ದರೆ ತಮ್ಮ ಇಷ್ಟಾರ್ತಗಳು ನೆರವೇರುವಲ್ಲಿ ತೊಡಕುಗಳು ಕಂಡುಬರುತ್ತವೆ ಎಂಬುದು ಭಕ್ತರ ನಂಬಿಕೆ.

ಮಲ್ಲಯ್ಯನ ಮೂಲ ದೇವಾಲಯಕ್ಕೆ ಅಂಟಿಕೊಂಡಂತೆ ಈಶ್ವರ ದೇವಾಲಯವು ಪೂರ್ವಾಭಿಮುಖವಾಗಿದೆ. ಈ ದೇವಾಲಯ ಗರ್ಭಗೃಹ, ಸಭಾಮಂಟಪ, ಮಹಾಮಂಟಪಗಳಿಂದ ಕೂಡಿದ್ದು ಮಲ್ಲಯ್ಯನ ದೇವಾಲಯದ ಮಹಾಮಂಟಪಕ್ಕೆ ಸೇರಿಕೊಂಡಿದೆ. ಈ ದೇವಾಲಯದ ಗರ್ಭಗೃಹ ೮ ಅಡಿ ಉದ್ದ ೮ ಅಡಿ ಅಗಲವಿದೆ.[೧೭] ಇದರಲ್ಲಿ ಸುಮಾರು ೧೨ನೇ ಶತಮಾನಕ್ಕೆ ಸೇರಿದ ಸಮಭಂಗಿಯಲ್ಲಿ ನಿಂತಿರುವ ಶಿವ, ಪಾರ್ವತಿ ಮತ್ತು ಷಣ್ಮುಖನ ಶಿಲ್ಪಗಳಿವೆ. ಈ ಶಿಲ್ಪಗಳ ಮುಂಭಾಗದಲ್ಲಿ ೩ ಶಿವಲಿಂಗಗಳನ್ನು ಪ್ರತಿಷ್ಠಾಪಿಸಲಾಗಿದೆ.[೧೮] ಇಲ್ಲಿ ಈಶ್ವರನ ನಾಲ್ಕು ಕೈಗಳಲ್ಲಿ ತ್ರಿಶೂಲ, ಡಮರು, ಬಾಕು ಹಾಗೂ ಪಾನಪಾತ್ರಗಳಿವೆ. ಗರ್ಭಗೃಹದಲ್ಲಿದ್ದ ಮೊದಲಿನ ಮೂರ್ತಿ ನಂದಿ ವಾಹನವಾಗಿರುವ ಶಿವನದು; ಅದು ಹಾಳಾಗಿದ್ದರಿಂದ ಮಹಾಮಂಟಪದ ಆವರಣದಲ್ಲಿ ಇಡಲಾಗಿದೆ. ಗರ್ಭಗೃದ ಮುಂಭಾಗದಲ್ಲಿ ವಿಶಾಲವಾದ ಸಭಾ ಮಂಟಪವಿದ್ದು, ಇದರಲ್ಲಿ ಕೆಳಗೆ ಮೇಲೆ ಚೌಕ, ಮಧ್ಯ ೮-೧೬ ಭಾಗದ ಪಟ್ಟಿಕೆ, ಘಟ, ಭೋದಿಗೆಗಳಿಂದ ಕೂಡಿದ ಎರಡು ಕಂಬಗಳಿವೆ. ಇನ್ನು ೨ ಕಂಬಗಳು ಇದೇ ಮಾದರಿಯಲ್ಲಿದ್ದು ಅವುಗಳಲ್ಲಿ ಮಧ್ಯದ ಪಟ್ಟಿಕೆಗಳಿಲ್ಲ.[೧೯] ಕಂಬಗಳ ಮೇಲೆ ಆಧಾರದ ಭೋದಿಗೆಗಳು ಇವೆ. ಮಧ್ಯದಲ್ಲಿ ಪುಷ್ಪದ ಅಲಂಕಾರವನ್ನು ಹೊಂದಿದ ವಿತಾನವಿದೆ.

ಒಟ್ಟಿನಲ್ಲಿ ಈ ಸಭಾಮಂಟಪದಲ್ಲಿ ೧೨ ಕಂಬಗಳಿವೆ. ಈ ಸಭಾಮಂಟಪದ ಮುಂದೆ ೧೨ ಕಂಬಗಳನ್ನು ಹೊಂದಿದ ಮಹಾಮಂಟಪವು ಇದ್ದು, ಇದು ಮಲ್ಲಯ್ಯನ ದೇವಾಲಯದ ಮಹಾಮಂಟಪಕ್ಕೆ ಸೇರಿದ್ದು, ವಿಶಾಲವಾದ ಮಹಾಮಂಟಪವಾಗಿದೆ.[೨೦] ಇದಕ್ಕೆ ಪಶ್ಚಿಮ ಮತ್ತು ದಕ್ಷಿಣಕ್ಕೆ ದ್ವಾರಬಾಗಿಲುಗಳಿವೆ. ಧ್ವಾರದ ಪೇದ್ಯಭಾಗದಲ್ಲಿ ಶೈವ ದ್ವಾರಪಾಲಕರು ಲಲಾಟದಲ್ಲಿ ಶಿವ ಪಾರ್ವತಿ, ಲಕ್ಷ್ಮಿ ಚಿತ್ರವಿದೆ. ಪುಷ್ಪ, ಬಳ್ಳಿಗಳ ಅಲಂಕಾರಿಕ ಪಟ್ಟಿಕೆಗಳಿಂದ ಕೂಡಿದೆ ಮಹಾಮಂಟಪದಲ್ಲಿ ಶಿವನೆದುರಿಗೆ ೮ ಕಂಬಗಳ ನಂದಿ ಮಂಟಪವಿದೆ. ಇದರಲ್ಲಿ ಬೃಹತ್ ನಂದಿ ವಿಗ್ರಹವಿದ್ದು ಇದು ೧೨ ಅಡಿ ಉದ್ದ, ೬ ಅಡಿ ಎತ್ತರ ಹಾಗೂ ೪ ಅಡಿ ಅಗಲವಿದೆ.[೨೧]

ಮೂಲ ದೇವಾಲಯದ ಅದಿಷ್ಟಾನ, ಭಿತ್ತಿಯು ಸರಳವಾಗಿದ್ದು ಆಧುನಿಕ ಕಬ್ಬಿಣದ ಸರಳುಗನ್ನು ರಕ್ಷಣೆಗಾಗಿ ಅಳವಡಿಸಲಾಗಿದೆ. ಸರಳವಾದ ಪ್ರಸ್ತಾರ ಭಾಗವಿದ್ದು ಇದರಮೇಲ್ಭಾದಲ್ಲಿ ಕೈಪಿಡಿಗೋಡೆ ಇದೆ ಇದರಲ್ಲಿ ಆಧುನಿಕ ಗೂಡನ್ನು ನಿರ್ಮಿಸಿ ಅದರಲ್ಲಿ ಶಿವ ಪಾರ್ವತಿ ಕುಳಿತಭಂಗಿಯ ಶಿಲ್ಪಗಳಿದ್ದು ಗಣೇಶ,

ಕಾರ್ತಿಕೇಯ ಮುಂತಾದ ನಿಂತ ಶಿಲ್ಪಗಳಿವೆ. ಇದರ ಬಲಭಾಗಕ್ಕೆ ಗಜಲಕ್ಷ್ಮಿಯ ಚಿತ್ರಣವಿದೆ. ಕೈಪಿಡಿಗೋಡೆಯಮೇಲೆ ಸುತ್ತಲೂ ನಂದಿಯ ಶಿಲ್ಪಗಳಿವೆ. ಗರ್ಭಗೃಹದ ಮೇಲ್ಭಾಗದಲ್ಲಿ ದ್ರಾವಿಡ ಶೈಲಿಯ ಶಿಖರವಿದ್ದು ಇದರಲ್ಲಿ ಗೂಡುಗಳು, ಭಕ್ತರಶಿಲ್ಪಗಳು, ಕೂಟಗಳು, ದೇವರಶಿಲ್ಪಗಳು ಮುಂತಾದ ಅಲಂಕಾರಿಕ ಕೆತ್ತನೆಗಳಿಂದ ಕೂಡಿದೆ. ಈ ಶಿಖರದಲ್ಲಿ ಹಿಂದೆ ಕಳಸವಿದ್ದು, ಅದು ನಂತರದಲ್ಲಿ ಬಿದ್ದುಹೋಗಿದೆ. ಈ ಶಿಖರವನ್ನು ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲಾಗಿದೆ.

ಮುಖ್ಯದೇವಾಲಯದ ದಕ್ಷಿಣದ್ವಾರದ ಮುಂಭಾಗದಲ್ಲಿ ಉತ್ತರಾಭಿಮುಖವಾಗಿ ಪ್ರಕಾರಗೋಡೆಗೆ ಹೊಂದಿಕೊಂಡಂತೆ ಮತ್ತೊಂದು ದೇವಾಲಯವಿದೆ. ಇದನ್ನು ಹೆಗ್ಗಣ್ಣನ ಗುಡಿ ಎಂದು ಕರೆಯುತ್ತಾರೆ. ಮೂಲ ದೇವಾಲಯ ಆಳಾಗಿದ್ದರಿಂದ ಅದೇ ಸ್ಥಳದಲ್ಲಿ ದೇವಾಲಯವನ್ನು ಆಧುನಿಕ ಶೈಲಿಯಲ್ಲಿ ನಿರ್ಮಿಸಲಾಗಿದೆ. ಇದರಲ್ಲಿ ೨ ಗರ್ಭಗೃಹಗಳು ಇವೆ. ಮೊದಲಿನ ಗರ್ಭಗೃಹದಲ್ಲಿ ಹೆಗ್ಗಪ್ಪನ ಶಿಲ್ಪವಿದೆ. ಮೂಲ ಲಿಂಗವಿದ್ದು, ಅದು ನಶಿಸಿರುವುದರಿಂದ ಪಾಣಿಪೀಠದಮೇಲೆ ಹೆಗ್ಗಪ್ಪನ ಹಳೆ ಶಿಲ್ಪವನ್ನು ಇಟ್ಟಿದ್ದಾರೆ. ಗರ್ಭಗೃಹದ ದ್ವಾರದಲ್ಲಿ ಶೈವದ್ವಾರಪಾಲಕರು ಇದ್ದು ಉಳಿದ ಭಾಗಗಳು ಸರಳತೆಯಿಂದ ಕೂಡಿದೆ. ಇದರ ಪಕ್ಕ ಮತ್ತೊಂದು ಗರ್ಭಗೃಹವಿದೆ ಇದರಲ್ಲಿ ಆಂಜನೇಯನ ಮೂರ್ತಿ ಇದ್ದು, ಕಟ್ಟೆಯಮೇಲೆ ವೀರಗಲ್ಲು ಇದೆ. ಈ ಎರಡು ಗರ್ಭಗೃಹದ ಮಧ್ಯದಲ್ಲಿ ನಶಿಸಿದ ಅಸ್ಪಷ್ಟ ಶಿಲ್ಪವಿದೆ. ಗರ್ಭಗೃಹಗಳ ಮುಂದೆ ಸಭಾಮಂಟಪವಿದೆ. ಬಲಭಾಗದ ಮೂಲೆಯಲ್ಲಿ ಷಟ್‌ಕೋನದ ಕಲ್ಲನ್ನು ಇಟ್ಟಿದ್ದಾರೆ.

ದೇವಾಲಯದ ದಕ್ಷಿಣ ದ್ವಾರದ ಎಡಕ್ಕೆ ಪ್ರಕಾರ ಗೋಡೆಗೆ ಹೊಂದಿಕೊಂಡಂತೆ ಪಾಕಶಾಲೆ ಇದೆ. ಅಲ್ಲದೆ ಎರಡು ಚಿಕ್ಕ ಚಿಕ್ಕ ಉಪ ದೇವಾಲಯಗಳಿವೆ. ಇವು ಗರ್ಭಗೃಹಗಳನ್ನು ಮಾತ್ರ ಹೊಂದಿದ್ದು ಎರಡರಲ್ಲಿಯೂ ಶಿವಲಿಂಗವಿದೆ ಮತ್ತು ಜಾತ್ರೆಯ ಸಂದರ್ಭದಲ್ಲಿ ಪಸಲುಗಳನ್ನು ಬೆಳೆಸಲು ಬಳಸುವ ಮಣ್ಣಿನ ತಟ್ಟೆ ಮತ್ತು ಗಡಿಗೆಗಳನ್ನು ಇಡಲಾಗಿದೆ. ದೇವಾಲಯದ ಮುಂದೆ ನಂದಿಯ ಶಿಲ್ಪವಿದೆ. ದೇವಾಲಯದ ಎಡಬದಿಯಲ್ಲಿ ಒಂದು ಮರವಿದ್ದು ಅದರ ಸುತ್ತಲೂ ಕಟ್ಟೆಯನ್ನು ನಿರ್ಮಿಸಿದ್ದಾರೆ.

ಮುಖ್ಯ ದೇವಾಲಯದ ಹಿಂಬದಿಯ ಗೋಡೆಗೆ ಹೊಂದಿಕೊಂಡಂತೆ ಮತ್ತೊಂದು ದೇವಾಲಯವಿದೆ. ಈ ದೇವಾಲಯದಲ್ಲಿ ಶಿವಲಿಂಗವಿದ್ದು ಮುಂದೆ ನಂದಿಯ ಶಿಲ್ಪವಿದೆ. ದೇವಾಲಯದ ಪೂರ್ವ ದ್ವಾರಬಾಗಿಲಿಗೆ ಬಂದಾಗ ಎಡಬದಿಯಲ್ಲಿ ಒಂದು ಶಿವಲಿಂಗ ದೇವಾಲಯವಿದೆ. ಗರ್ಭಗೃಹ, ಮುಖ ಮಂಟಪವನ್ನು ಹೊಂದಿದೆ. ಇದನ್ನು ನಂದಿ, ಹಾದಿಲಿಂಗ, ಖಾದಾರಲಿಂಗ ಎಂತಲೂ ಕರೆಯುತ್ತಾರೆ. ಇದರ ಶಿಖರವು ದ್ರಾವಿಡ ನಾಗರ ಶೈಲಿಯಲ್ಲಿದ್ದು, ಶಿಥಲಾವಸ್ಥೆಯಲ್ಲಿದೆ.

ಮುಖಮಂಟಪದಲ್ಲಿ ನಂದಿಶಿಲ್ಪವಿದ್ದು ದೇವಾಲಯದ ಬಾಗಿಲುವಾಡವು ಕಣಶಿಲೆಯಲ್ಲಿ ನಿರ್ಮಿತವಾಗಿದ್ದು ಲಲಾಟದಲ್ಲಿ ಗಜಕ್ಷ್ಮಿ, ದ್ವಾರಪಟ್ಟಿಕೆ ಸರಳತೆಯಿಂದ ಕೂಡಿದೆ. ಈ ದೇವಾಲಯದ ಕುರಿತು ಹಿರಿಯರು ಒಂದು ಕಥೆಯನ್ನು ಹೇಳುತ್ತಾರೆ. "ಟಿಪ್ಪುಸುಲ್ತಾನನ ಕಾಲದಲ್ಲಿ ಮುಸ್ಲಿಂ ಸೈನ್ಯ ಹಿಂದೂ ಪಾಳೆಗಾರರ ರಾಜ್ಯಗಳ ಮೇಲೆ ದಂಡೆತ್ತಿಬಂದು ಮಹದ್ವಾರದ ಹೊರಗೆ ನಿಂತು ಸೈನ್ಯದ ಸೇನಾಪತಿ ಟಿಪ್ಪುಸುಲ್ತಾನನು ಖಾದಾರಲಿಂಗನ ಗುಡಿಯನ್ನು ನೊಡುತ್ತಾನೆ. ನಂತರ ಇಲ್ಲಿರುವುದು ಹಿಂದೂ ದೇವರೋ ಮುಸ್ಲಿಂ ದೇವರೋ ಎಂಬ ದ್ವಂದ್ವಕ್ಕೆ ಬಿದ್ದು ಹೊರಗಿನಿಂದಲೇ ಒಳಗೆ

ಯಾರಿದ್ದೀರಿ? ಎಂದು ಕೂಗುತ್ತಾನೆ. ಒಳಗಿನಿಂದ 'ನಾನು ಖಾದಾರಲಿಂಗಪ್ಪ' ಎಂಬ ಧ್ವನಿ ಕೇಳುತ್ತದೆ. ಟಿಪ್ಪುಸುಲ್ತಾನನು ಇದುಮುಸ್ಲಿಂ ದೇವರು ಎಂದುಕೊಂಡು ದೇವಾಲಯವನ್ನು ಮುಟ್ಟದೇ ಹೊರಟು ಹೋಗುತ್ತಾನೆ". ಎಂಬುದೇ ಈ ಕತೆಯ ಸಾರಾಂಶವಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಕ್ರಿ.ಶ. ೧೫-೧೭ ನೇ ಶತಮಾನದಲ್ಲಿ ಮುಸ್ಲಿಂ ಅರಸರ ದಾಳಿಯಿಂದ ತಪ್ಪಿಸಿಕೊಳ್ಳಲು ಈ ದೇವಾಲಯವನ್ನು ಕಟ್ಟಿರಬಹುದು ಅಥವಾ ದೇವಾಲಯಕ್ಕೆ ಮುಸ್ಲಿಂ ಭಕ್ತರು ಬರಲಿ ಎಂಬ ಉದ್ದೇಶದಿಂದ ಇದನ್ನು ನಿರ್ಮಿಸಿರಬಹುದು.[೨೨]

ದೇವಾಲಯದ ಪೂರ್ವ ದ್ವಾರದ ಅದಿಷ್ಠಾನವು ೬ ಪಟ್ಟಿಕೆಗಳಿಂದ ಕೂಡಿದೆ. ಮೊದಲ ಮತ್ತು ಎರಡನೇ ಪಟ್ಟಿಕೆ ಸರಳವಾಗಿದ್ದು, ೩ ಮತ್ತು ೪ನೇ ಪಟ್ಟಿಕೆಯು ಸುರುಳಿಯ ಅಲಂಕಾರವನ್ನು ಹೊಂದಿದ್ದು, ಕೊನೆಯಲ್ಲಿ ಒಂದು ಉಬ್ಬು ಶಿಲ್ಪವಿದೆ. ೫ನೇ ಪಟ್ಟಿಕೆಯಲ್ಲಿ ನರ್ತಕಿಯರ ಶಿಲ್ಪವನ್ನು ಚಿತ್ರಿಸಲಾಗಿದೆ. ೬ನೇ ಪಟ್ಟಿಕೆಯಲ್ಲಿ ಹ್ಯಾಳಿಯ ಸಾಲನ್ನು ಚಿತ್ರಿಸಿದ್ದು, ಕೊನೆಯಲ್ಲಿ ಒಂದು ಪುಷ್ಪದ ಚಿತ್ರಣವಿದೆ. ದ್ವಾರದ ಭಿತ್ತಿಯ ಭಾಗವು ಸರಳತೆಯಿಂದ ಕೂಡಿದೆ. ಬಿತ್ತಿಯ ಮೇಲ್ಭಾಗದ ಗೋಪುರವು ಸುಂದರವಾದ ಅಲಂಕಾರವನ್ನು ಹೊಂದಿದ್ದು, ಇದು ೫ ಹಂತಗಳಿಂದ ಕೂಡಿದೆ. ಮೊದಲನೇ ಹಂತದಲ್ಲಿ ಶೈವ ದ್ವಾರಪಾಲಕರ ಶಿಲ್ಪಗಳು, ನರ್ತಕಿಯ ಶಿಲ್ಪ, ಕೂಟಗಳ ಅಲಂಕಾರವನ್ನು ಹೋಂದಿದೆ. ೨ನೇ ಹಂತದಲ್ಲಿ ಉದುಂಬರದ ಚಿತ್ರಣ, ವಾದ್ಯಗಾರರ ಶಿಲ್ಪಗಳು, ನರ್ತಕಿಯರ ಶಿಲ್ಪಗಳು, ಪುರುಷರ ಶಿಲ್ಪಗಳು, ಕೂಟಗಳ ಚಿತ್ರಣವಿದೆ.

ಮೂರನೇ ಹಂತದಲ್ಲಿ ಉದುಂಬರ, ಚಾಮರಧಾರೆಯರ ಶಿಲ್ಪ, ಭಕ್ತರಶಿಲ್ಪ, ಕೂಟಗಳ ಅಲಂಕಾರಿಕ ಕೆತ್ತನೆಗಳಿಂದ ಕೂಡಿದೆ. ನಾಲ್ಕು ಮತ್ತು ಐದನೇ ಹಂತ ಶಿಥಿಲವಾಗಿರುವುದನ್ನು ಕಾಣಬಹುದಾಗಿದೆ. ದ್ವಾರದ ಪೇದ್ಯಭಾಗದಲ್ಲಿ ಜಯವಿಜಯ ದ್ವಾರಪಾಲಕರು ಇದ್ದು ಎಡಭಾಗದಲ್ಲಿ ಸಿಂಹ, ನಂದಿ, ಎಗಲಿಗೆ ಧನಸ್ಸನ್ನು ಧರಿಸಿ ಕೈಮುಗಿದು ನಿಂತಿರುವ ವೀರನ ಉಬ್ಬುಶಿಲ್ಪವಿದೆ. ಮತ್ತೊಂದುಕಡೆ ಹ್ಯಾಳಿಯಶಿಲ್ಪ, ವೀರನು ಪ್ರಾಣಿಯೊಂದಿಗೆ ಹೋರಾಡುತ್ತಿರುವ ಚಿತ್ರಣ ಮತ್ತು ಇತರ ಉಬ್ಬು ಶಿಲ್ಪಗಳ ಅಲಂಕಾರವಿದೆ. ಲಲಾಟದಲ್ಲಿ ಲಕ್ಷ್ಮಿಯ ಚಿತ್ರಣವಿದೆ. ಬಾಗಿಲುವಾಡದ ೪ ಪಟ್ಟಿಕೆಗಳು ಹೂ ಬಳ್ಳಿಗಳ ಅಲಂಕಾರ ಹೊಂದಿದೆ. ದ್ವಾರಪಾಲಕರ ಪಕ್ಕದಲ್ಲಿ ಎದರುಬದರು ನಿಂತಿರುವ ನರ್ತಕಿಯರ ಶಿಲ್ಪಗಳಿವೆ. ಒಳಭಾಗದಲ್ಲಿ ೨ ಕಟ್ಟೆಗಳನ್ನು ನಿರ್ಮಿಸಿದ್ದು, ಅದರ ಮೇಲೆ ೨ ಕಂಬಗಳಿವೆ. ಇದರ ಮೇಲೆ ಹಾವಿನ ತಲೆಯಮೇಲೆ ಕಾಲನ್ನು ಇಟ್ಟು ನಿಂತಿರುವ ಗಣೇಶ, ಹಂಸ, ನರ್ತಕಿಯರು, ಶಿವಲಿಂಗ, ಗಣೇಶ ಮತ್ತು ಪೂರ್ಣಕುಂಬಗಳ ಅಲಂಕಾರದಿಂದ ಕೂಡಿದೆ. ಭೋದಿಗೆಯು ಕಮಲದ ಮೊಗ್ಗು ಇಳಿಬಿದ್ದಿರುವಂತಿದೆ. ಕಟ್ಟೆಯು ೩ ಪಟ್ಟಿಕೆಯಲ್ಲಿದ್ದು ಕೆಳಭಾಗ ಸರಳವಾಗಿದೆ. ಮಧ್ಯಭಾಗದಲ್ಲಿ ಆನೆಗಳು ಒಂದಕ್ಕೊಂದು ಮುಖ ಮಾಡಿರುವ ಶಿಲ್ಪ, ಹಂಸ, ಪುಷ್ಪ, ಹ್ಯಾಳಿಯ ಕೆತ್ತನೆಯನ್ನೊಳಗೊಂಡಿದೆ. ಮೇಲ್ಭಾಗದಲ್ಲಿ ಕಟಕವೃತ್ತದ ಚಿತ್ರವಿದ್ದು ಮಧ್ಯದಲ್ಲಿ ಹ್ಯಾಳಿಯ ಶಿಲ್ಪವಿದೆ. ಉದುಂಬರವು ಸರಳವಾಗಿದ್ದು ಮಧ್ಯದಲ್ಲಿ ಪುಷ್ಪದ ಅಲಂಕಾರವಿದೆ. ದ್ವಾರದ ಹಿಂಬದಿಯಲ್ಲಿಯೂ ಇದೇರಿತಿಯ ಅಲಂಕಾರವನ್ನು ಕಂಡರಿಸಲಾಗಿದೆ.

ದೇವಾಲಯದ ಪೂರ್ವದ್ವಾರದ ಬಲಬದಿಯ ಹೊರಭಾಗದಲ್ಲಿ ಪ್ರಕಾರಗೋಡೆಗೆ ಹೊಂದಿಕೊಂಡಂತೆ ಒಂದು ಸಿಂಹಾಸನ ಮಂಟಪವಿದೆ. ಇದರಲ್ಲಿ ೧೨ ಕಂಬಗಳಿವೆ. ಮಂಟಪಕ್ಕೆ ಹೊಗಲು ಸೋಪಾನಗಳಿದ್ದು, ಪ್ರಾರಂಭದಲ್ಲಿ ಸಿಂಹಗಳ ಶಿಲ್ಪಗಳಿಂದ ಕೂಡಿದ ೨ ಕಂಬಗಳು ಇವೆ. ಈ ಕಂಬಗಳ ಪಕ್ಕದಲ್ಲಿ ಮತ್ತೆರಡು ಕಂಬಗಳಿದ್ದು, ಇದರಲ್ಲಿ ಕಂಬದಲ್ಲಿ ಕಂಬದ ಕೆತ್ತನೆ ಇರುವುದನ್ನು ಕಾಣಬಹುದು. ಮಂಟಪದ ಮಧ್ಯ ಭಾಗದಲ್ಲಿ ಒಂದು ಕಟ್ಟೆಯನ್ನು ನಿರ್ಮಿಸಿದ್ದು, ಅದರ ಸುತ್ತಲೂ ೪ ಕಂಬಗಳು ಇವೆ. ಕಾಂಡದ ಕೆಳ ಮತ್ತು ಮಧ್ಯಭಾಗ ಚೌಕಾಕಾರವಾಗಿದ್ದು, ನಂದಿ, ಶಿವಲಿಂಗ, ಸರ್ಪ, ಭಕ್ತರಶಿಲ್ಪ, ಹ್ಯಾಳಿಯ ಶಿಲ್ಪ, ಕಾಳೀಂಗಮರ್ಧನನ ಶಿಲ್ಪ, ಮುಂತಾದ ಉಬ್ಬುಶಿಲ್ಪಗಳ ಚಿತ್ರಣವಿದೆ. ಭೋದಿಗೆಯು ಕಮಲದ ಮೊಗ್ಗು ಇಳಿಬಿದ್ದಿರುವಂತೆ ರಚನೆಯಿದೆ. ಮಂಟಪದಲ್ಲಿನ ಬುವನೇಶ್ವರಿಯು ನಕ್ಷತ್ರಾಕಾರವಾಗಿದ್ದು ಪುಷ್ಪದ ಅಲಂಕಾರವಿದೆ. ಮಂಟಪದ ಅದಿಷ್ಟಾನ, ಬಿತ್ತಿ ಸರಳವಾಗಿದ್ದು, ಪ್ರಸ್ತರವು ವಿಜಯನಗರ ಕಾಲದ ಹಂಪಿಯ ವಿರೂಪಾಕ್ಷೇಶ್ವರ ದೇವಾಲಯದಲ್ಲಿರುವ 'ಎಸ್' ಆಕಾರದ ಮಾದರಿಯಲ್ಲಿದೆ. ಇದರ ಮೇಲ್ಭಾದಲ್ಲಿ ಸುಟ್ಟ ಇಟ್ಟಿಗೆ ಮತ್ತು ಗಾರೆಯಿಂದ ಮಾಡಿದ ಗೂಡುಗಳ ಅಲಂಕಾರವಿದೆ. ಇದರಲ್ಲಿ ಶಿಲ್ಪಗಳು ಇದ್ದಿರುವ ಸಂಗತಿ ತಿಳಿಯುತ್ತದೆಯಾದರು ಪ್ರಸ್ತುತ ಶಿಲ್ಪಗಳು ನಶಿಸಿಹೊಗಿವೆ. ಒಂದು ಗೂಡಿನಲ್ಲಿ ಮಾತ್ರ ಶಿಲ್ಪವಿರುವುದು ಕಾಣುತ್ತದೆ. ಗೂಡಿನಲ್ಲಿ ದ್ವಾರಪಾಲಕರ ಶಿಲ್ಪಳು ಅಕ್ಕ ಪಕ್ಕ ಭಕ್ತರ ಶಿಲ್ಪಗಳು, ದೇವತೆಗಳ ಶಿಲ್ಪಗಳು, ಮುಂತಾದ ಅಲಂಕಾರಿಕ ಕೆತ್ತನೆಗಳಿವೆ. ಗೂಡುಗಳ ಮಧ್ಯ ಕೂಟದ ಅಲಂಕಾರವಿದೆ. ಈ ಮಂಟಪದ ಲಕ್ಷಣವನ್ನು ಗಮನಿಸಿದರೆ ಇದು ವಿಜಯನಗರ ಕಾಲದ ಮಂಟಪವೆಂದು ತಿಳಯುತ್ತದೆ.ಈ ಮಂಟಪದ ಮುಂಭಾಗದಲ್ಲಿ ದೀಪಸ್ತಂಭವಿದೆ. ಇದರ ಮುಂಭಾಗದಲ್ಲಿ ಶಿಭಾರವಿದ್ದು, ಇದರ ಮೇಲೆ ತ್ರಿಶೂಲದ ಅಲಂಕಾರವಿದೆ.

ದೇವಾಲಯದ ದಕ್ಷಿಣದ್ವಾರವು ೩ ಅಂತಸ್ಥಿನಿಂದ ಕೂಡಿದ್ದು, ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲಾಗಿದೆ. ಈ ದ್ವಾರವನ್ನು ಗಾಳಿಯ ಮಂಟಪ ಎಂದು ಕರೆಯುತ್ತಾರೆ. ಬಾಗಿಲುವಾಡದಲ್ಲಿ ನಾಗ ಶಿಲ್ಪಗಳನ್ನು ಕಂಡರಿಸಲಾಗಿದೆ. ಇದರ ಮುಂಭಾಗದಲ್ಲಿ ೨ ಒಂಡಗಳು (ಬಾವಿ) ಇವೆ. ಮೊದಲೆನೆಯದು ಮಲ್ಲಯ್ಯನ ಹೊಂಡ ಇದರಲ್ಲಿ ನೀರು ಸದಾಕಾಲ ಇರುತ್ತದೆ. ಇದರ ಪಕ್ಕದಲ್ಲಿ ಈರಣ್ಣ ಹೊಂಡವಿದೆ. ಇದು ಮಳೆಯಾಶ್ರಿತವಾಗಿದೆ. ದಂಡೆಯಮೇಲೆ ಸ್ತ್ರೀಯು ಕೈಮುಗಿದು ಕುಳಿತಿರುವ ಶಿಲ್ಪವಿದ್ದು, ಇದರ ಮೇಲ್ಭಾಗದಲ್ಲಿ ಶಾಸನವಿದೆ. ಇದರ ಪಕ್ಕದಲ್ಲಿ ಮತ್ತೊಂದು ವೀರಗಲ್ಲು ಇದ್ದು, ಇದರ ಮೇಲ್ಭಾಗದಲ್ಲಿ ಸೂರ್ಯ, ಚಂದ್ರರರ ಚಿತ್ರಣವಿದ್ದು, ಶಾಸನವಿರುವುದು ಕಾಣುತ್ತದೆ. ದಕ್ಷಿಣ ದ್ವಾರದ ಬಲಭಾಗದಲ್ಲಿ ವೀರಗಲ್ಲು ಇದೆ. ದ್ವಾರದ ಮುಂಭಾಗದಲ್ಲಿ ತೃಟಿತವಾಗಿರುವ ಸ್ಮಾರಕದ ವಿವಿಧ ಕುರುಹುಗಳಿವೆ.

ದೇವಸ್ಥಾನಕ್ಕೆ ಹೋಗುವ ದಾರಿಯಲ್ಲಿ ಎಡಕ್ಕೆ ರಥ ವಿದೆ. ಇದರ ರಕ್ಷಣೆಗಾಗಿ ಬ್ರಿಟೀಷರ ಕಾಲದ ಕಟ್ಟಡವನ್ನು ನಿರ್ಮಿಸಲಾಗಿದೆ. ಇದರ ಮುಂಭಾಗದಲ್ಲಿ ರಥದ ಗಾಲಿಗಳು ಮತ್ತು ಸ್ವಲ್ಪ ಮುಂದೆ ಶಾಸನವಿದೆ. ಥೇರು ಬೀದಿಯಲ್ಲಿ ಅನೇಕ ಸಾಲು ಮಂಟಪಗಳು ಮತ್ತು ಎದುರು ಬಸವಣ್ಣನ ಮಂಟಪವಿದೆ. ದಾರಿಯ ಬಲಕ್ಕೆ ನೆಲದಲ್ಲಿ ಅವಿತಿರುವಂತ ಒಂದು ಮಾಸ್ತಿಗಲ್ಲು ಇದೆ. ಅಲ್ಲದೆ ತೃಟಿತವಾಗಿರುವ ದೇವಾಲಯವಿದ್ದು, ಅದರಲ್ಲಿ ಭೈರವನ ಶಿಲ್ಪವಿದೆ. ಇದರ ಮುಂಭಾಗದಲ್ಲಿ ಶಿಭಾರವಿದ್ದು, ಮೇಲೆ ಮಧ್ಯಭಾಗದಲ್ಲಿ ತ್ರಿಶೂಲ ಮತ್ತು ಅಕ್ಕಪಕ್ಕ ಕುಂಬದ ರಚನೆಇದೆ. ಕೆಳಗಡೆ ಮಧ್ಯದಲ್ಲಿ ಪಾದುಕೆಗಳಿವೆ. ಇದರ ಪಕ್ಕದಲ್ಲಿ ಒಂದು ಆತ್ಮ ಬಲಿದಾನದ ವೀರಗಲ್ಲಿದ್ದು, ಅದಕ್ಕೆ ಸ್ಥಳೀಯರು ಜಾಪಾಳ ಈರಣ್ಣ ಎಂದು ಹೆಸರಿಟ್ಟಿದ್ದಾರೆ. ಇದರ ಪಕ್ಕದಲ್ಲಿ ಧನಸ್ಸನ್ನು ಹಿಡಿದಿರುವ

ವೀರಗಲ್ಲು ಇದ್ದು, ಮುಂಭಾಗದಲ್ಲಿ ಸಮುದಾಯ ಭವನವಿದೆ. ಇದನ್ನು ಚಲುವಾದಿಯವರ ಸಮುದಾಯದ ದೇವಸ್ಥಾನ ಎಂದು ಹೇಳುತ್ತಾರೆ. ಇದರ ಪಕ್ಕದಲ್ಲಿ ಮತ್ತೊಂದು ದೇವಸ್ಥಾನವಿದ್ದು, ಅದನ್ನು ಹರಿಜನರ ದೇವಾಲಯವೆಂದು ಕರೆಯುತ್ತಾರೆ.

ಇದರ ಮುಂಭಾಗದಲ್ಲಿ ಶಿಭಾರವಿದ್ದು, ಇದರ ಮುಂದೆ ಗರುಡ ಸ್ತಂಭವಿದೆ. ದೇವಾಲಯದ ಆವರಣದಲ್ಲಿ ಅನೇಕ ನಾಗ ಶಿಲ್ಪಗಳು ಮತ್ತು ಇತರ ಶಿಲ್ಪಗಳಿರುವುದು ಕಂಡುಬಂದಿದೆ.

**೩.೩ ಮೂರ್ತಿಶಿಲ್ಪಗಳು**

ವಾಸ್ತು ಶಿಲ್ಪಗಳಷ್ಟೇ (ದೇವಾಲಯ) ಪ್ರಾಮುಖ್ಯತೆಯನ್ನು ಮೂರ್ತಿಶಿಲ್ಪಗಳು ಸಹ ಹೊಂದಿವೆ. ಮೂರ್ತಿಶಿಲ್ಪವು ಶಿಲ್ಪದಲ್ಲಿಯೇ ಸೇರುವ ಅನಾದಿಯಾದ ಕಲೆ. ಶಿಲ್ಪ ಎನ್ನುವ ಮಾತು ಮೊದಲು ಬಹಳ ವ್ಯಾಪಕವಾದ ಅರ್ಥವನ್ನು ಪಡೆದಿತ್ತು. ಪ್ರಸಿದ್ಧವಾದ ೬೪ ಕಲೆಗಳಿಗೆಲ್ಲಾ ಶಿಲ್ಪ ಎನ್ನುವ ಹೆಸರೇ ಅನ್ವಯವಾಗುತ್ತಿತ್ತು. ಶಿಲ್ಪ ಎಂಬ ಪದಕ್ಕೆ ಬೆರಗನ್ನುಂಟು ಮಾಡುವ ಕೈ ಕೆಲಸ ಎಂಬ ಅರ್ಥವಿದೆ. ಸಂಸ್ಕೃತದ ಶಿಲ್ಪವೆಂಬ ಶಬ್ಧ 'ಶೀಲಸಮಧೌ' ಎನ್ನುವ ಧಾತುವಿನಿಂದ ಉತ್ಪತ್ತಿಯಾಗಿದೆ.[೨೩] ಸಮಾಧಿ ಎಂಬ ಅರ್ಥವುಳ್ಳ ಶೀಲಾಧಾತುವು ತಪಸ್ಸನ್ನು ಸೂಚಿಸುತ್ತದೆ. ಅಂದರೆ ತಪಸ್ಸಿನ ಪ್ರಭಾವದಿಂದ ನಿರ್ವಹಿಸಲ್ಪಡುತ್ತಿರುವುದು ಶಿಲ್ಪ ಎಂಬುವುದು ಒಂದು ಅರ್ಥ. ಶಿಲ್ಪೋಪನೊಷತ್ತೆಂಬ ಗ್ರಂಥವು ಜಗತ್ತೆನೆಲ್ಲಾ ಸೃಷ್ಟಿ ಮಾಡಿದ ಬ್ರಹ್ಮನು ತನ್ನ ಮನಸ್ಸಿನಿಂದ ಮಾಡಿದುದ್ದೆಲ್ಲಾ ಶಿಲ್ಪವೇ ಎಂದು ಹೇಳುತ್ತದೆ.[೨೪]

ಸಂಸ್ಕೃತದ ಪ್ರಾಚೀನ ಗ್ರಂಥಗಳಲ್ಲಿ ಶಿಲ್ಪ ಶಬ್ಧವನ್ನು 'ಕಲಾಕೌಶಲ' ಎಂಬ ಅರ್ಥದಲ್ಲಿ ಬಳಸಲಾಗಿದೆ.[೨೫] ಶಿಲ್ಪವೆಂದರೆ. 'ಲಲಿತ ಅಥವಾ ಯಂತ್ರ ಕಲೆ' ಎಂದು ಅರ್ಥವಾಗುತ್ತದೆ. ಮುಂದೆ ಈ ಪದದ ವ್ಯಾಪ್ತಿ ಪರಿಮಿತಗೊಂಡು ಶಿಲ್ಪ ಎಂದರೆ ಮೂರ್ತಿಗಳ ನಿರ್ಮಾಣ ಎಂಬ ಅರ್ಥಕ್ಕೆ ಸೀಮಿತವಾಗುತ್ತದೆ.[೨೬] ಮೂರ್ತಿಯೆಂಬುದಕ್ಕೆ ಪರ್ಯಾಯವಾಗಿ ಬಳಸಿರುವ ಪ್ರತಿಮಾ, ಬಿಂಬ, ಪ್ರತಿಕೃತಿ, ವಿಗ್ರಹ ಎಂಬ ಪದಗಳು ಅದೊಂದು ಭೌತಿಕ ವಸ್ತು ಎಂಬಂತ್ತೆ ಅರ್ಥ ಕೊಡುತ್ತವೆ. ಮೂರ್ತಿ ಶಿಲ್ಪವನ್ನು ಕುರಿತು ಶಾಸ್ತ್ರೀಯ ಅಧ್ಯಯನ ಮಾಡುವುದಕ್ಕೆ ಮೂರ್ತಿಶಾಸ್ತ್ರ ಅಥವಾ ಪ್ರತಿಮಾಶಾಸ್ತ್ರವೆಂದು ಎಂದು ಕರೆಯಲಾಗುತ್ತದೆ.

ಮೂರ್ತಿಶಿಲ್ಪವನ್ನು ದೇವಶಿಲ್ಪ ಮತ್ತು ಮಾನವಶಿಲ್ಪ ಎಂಬ ಎರಡು ಭಾಗಗಳಾಗಿ ವಿಂಗಡಿಸಲಾಗಿದೆ. ದೇವಶಿಲ್ಪಗಳು ಎಂದರೆ ದೇವಸಂಬಂಧ ಇರಿಸಿಕೊಂಡಿರುವ ಶಿಲ್ಪಗಳು. ಅಂದರೆ ಯಜ್ಞವೇದಿ, ಯಜ್ಞಕುಂಡ, ಯಜ್ಞಶಾಲೆ, ದೇವಾಲಯ, ದೇವಮೂರ್ತೋ, ದೇವೋಪಕರಣ, ಪೂಜಾಪಾತ್ರೆ, ಸುವರ್ಣಾಲಂಕಾರ, ರಥ, ಆಯುದಗಳು, ಯಜ್ಞ ಮತ್ತು ಸುವರ್ಣ, ತಾಮ್ರ, ಕಬ್ಬಿಣ, ಮರ, ಕಲ್ಲು ಎಂಬ ಪಂಚವಿಧ ವಸ್ತುಗಳಲ್ಲಿ ತಯಾರಿಸಿ ದೇವಾಲಯಕ್ಕೆ ಯಜ್ಞ ಮತ್ತು ಪೂಜೆಗೆ ಸಂಬಂಧಿಸಿದಂತೆ ನಿರ್ಮಿಸುವ ಶಿಲ್ಪಗಳು.[೨೭] ಪ್ರಪಂಚದಲ್ಲಿ ಮಾನವನ ಉಪಯೋಗಾರ್ಥವಾಗಿ ಅವನ ಬದುಕನ್ನು ಸುಖಗೊಳಿಸಲು ಮತ್ತು ಅವನ ಆತ್ಮದ ಸಂಸ್ಕರಣೆಗೆ ಅವಶ್ಯವಾಗು ಪಂಚ ವಿಧ ಶಿಲ್ಪಗಳನ್ನು ನಡೆಸಲಾಗುತ್ತದೆ. ಇವು ಇಹದಲ್ಲಿ ಮನುಷ್ಯನ ಜೀವನವು ಸುಖಮಯವಾಗಿರುವಂತೆ ನಡೆಸಲು ನೆರವಾಗುತ್ತವೆ.

ಇಂತಹ ಮನುಷೋಪಯೋಗಿ ವಸ್ತು ನಿರ್ಮಾಣವು 'ಮಾನವಶಿಲ್ಪ' ಎಂದು ಕರೆಯಲ್ಪಡುತ್ತದೆ.[೨೮] ಶಿಲ್ಪವು ಮಾನವನ ಬಹಿರಂಗ ಮತ್ತು ಅಂತರಂಗಗಳನ್ನು ಸಂಸ್ಕರಿಸುವ ಪ್ರಬಲ ಶಕ್ತಿಯಾಗಿದೆ. ಮಾನವನಿಗು ಮತ್ತು ಮೂರ್ತಿ ಶಿಲ್ಪಕ್ಕೂ ಬಹಳ ನಿಕಟವಾದ ಸಂಬಂಧವಿದೆ. ಮಾನವನು ಹುಟ್ಟಿನಿಂದಲೇ ಮೂರ್ತಿಶಿಲ್ಪವೂ ಹುಟ್ಟಿತೆಂದು ಹೇಳಬಹುದು. ಮೂರ್ತಿಗಳಲ್ಲಿ ಮೂರ್ತ ಮತ್ತು ಅಮೂರ್ತ ರೂಪಗಳೆರಡು ಇವೆ. ಮೂರ್ತಿ ಬಿಂಬಗಳಿಗೆ ನಿರ್ದಿಷ್ಟವಾದ ರೂಪವಿದೆ. ಮನುಷ್ಯನ ಅದಕ್ಕಿಂತ ಹೆಚ್ಚಿನ ಅವಯವಗಳನ್ನು ಹೊಂದಿರುತ್ತದೆ. ಆದರೆ ಅಮೂರ್ತರೂಪಕ್ಕೆ ನಿರ್ದಿಷ್ಟ ರೂಪವಿರುವುದಿಲ್ಲ.

ಹುಟ್ಟು ಬಂಡೆಯ ಆಕಾರವನ್ನು ಅನುಸರಿಸಿ ಒಂದು ಕಲ್ಪಿತ ಆಕಾರವನ್ನು ರೂಪಿಸುತ್ತರೆ. ಇಂತಹ ಮೂರ್ತಿಗಳನ್ನು ಒಡಮೂಡಿದ ಅಥವಾ ಉದ್ಭವ ಮೂರ್ತಿಗಳೆಂದು ಸಾಮಾನ್ಯವಾಗಿ ಭಾವಿಸಿ, ಇವುಗಳ ಸುತ್ತಲೂ ಪೌರಾಣಿಕ ಕಥೆಗಳನ್ನು ಹೆಣೆಯಲಾಗುತ್ತದೆ. ಅನೇಕ ಕ್ಷೇತ್ರಗಳಲ್ಲಿನ ಉದ್ಭವ ಲಿಂಗಗಳು ನರಸಿಂಹ ಮೂರ್ತಿಗಳು, ಶಿವಲಿಂಗಳು, ಗಣಪತಿ ವಿಗ್ರಹಗಳು ಮತ್ತು ಇತರೆ ಸ್ತ್ರೀ ದೇವತಾ ಮೂರ್ತಿಗಳು ಈ ಬಗೆಯದ್ದಾಗಿವೆ.[೨೯]

ಪ್ರಸ್ತುತ ಅಧ್ಯಯನ ಕ್ಷೇತ್ರವಾದ ತೆಕ್ಕಲಕೋಟೆ ಪರಿಸರದಲ್ಲಿ ಪ್ರಾಚೀನ ಕಾಲವಧಿಯಿಂದ ಪಾಳೆಯಗಾರರ ಕಾಲಘಟ್ಟದವರೆಗೆ ನಿರ್ಮಿಸಲಾದ ಮೂರ್ತಿಶಿಲ್ಪಗಳು ಲಭ್ಯವಾಗಿವೆ. ಆಯಾ ರಾಜವಂಶಗಳ ಕಾಲದಲ್ಲಿ ನಿರ್ಮಾಣಗೊಂಡ ವಾಸ್ತುಶಿಲ್ಪಗಳು ಬೆಳೆದುಬಂದಿವೆ. ಪ್ರಸ್ತುತ ಅಧ್ಯಯನದ ಅನುಕೂಲಕ್ಕಾಗಿ ಶೈವ, ವೈಷ್ಣವ, ಶಾಕ್ತ ಎಂದು ವಿಭಾಸಿ ಅಭ್ಯಾಸಿಸಲಾಗಿದೆ.

**ಶೈವ ಮೂರ್ತಿಗಳು**

ಶೈವಧರ್ಮ ಅತೀ ಪ್ರಾಚೀನ ಧರ್ಮಗಳಲ್ಲಿ ಒಂದು. ಹರಪ್ಪಾ ಮೊಹೆಂಜೋದಾರ ಸಂಸ್ಕೃತಿಗಳ ಅವಶೇಷಗಳಲ್ಲಿ ಶಿವನ ಸ್ತಂಭಾಕಾರದ ಲಿಂಗಗಳು ಕಂಡುಬರುವುದರಿಂದ ಶೈವಧರ್ಮವು ಸಿಂಧೂ ನಾಗರಿಕತೆಯ ಪೂರ್ವದಲ್ಲಿಯೇ ಅಸ್ತಿತ್ವದಲ್ಲಿತ್ತೆಂದು ಊಹಿಸಬಹುದು. ಶೈವ ಧರ್ಮವು ಎಷ್ಟು ಪ್ರಾಚೀನವೋ ಅಷ್ಟೆ ವ್ಯಾಪಕವಾಗಿ ಹರಡಿತ್ತೆಂಬುವುದಕ್ಕೆ ಎಲ್ಲೆಡೆಗಳಲ್ಲಿಯೂ ಕಾಣುವ ಶಿವ ದೇವಾಲಯಗಳು ಮತ್ತು ಲಿಂಗಗಳೇ ಸಾಕ್ಷಿಯಾಗಿವೆ.[೩೦] ಅಧ್ಯಯನದ ಕ್ಷೇತ್ರವಾದ ತೆಕ್ಕಲಕೋಟೆ ಪರಿಸರದಲ್ಲಿ ಶೈವ ಶಿಲ್ಪಗಳಲ್ಲಿ ಉದ್ಭವ ಮೂರ್ತಿಗಳು, ಲಿಂಗಗಳು, ನಂದಿ, ಗಣೇಶ, ಭೈರವ ಪ್ರಮುಖವಾಗಿ ಈ ಪರಿಸರದಲ್ಲಿ ಕಾಣಬರುತ್ತವೆ.

**ಗಜಲಕ್ಷ್ಮಿ**

ಈ ದೇವಿಯ ಶಿಲೆಯ ಬಳಕೆಯ ದೃಷ್ಟಿಯಿಂದ ನೋಡಿದರೆ ಕಲ್ಯಾಣ ಚಾಲುಕ್ಯ ಮನೆತನಕ್ಕೆ ಸಂಭಂಧಿಸಿದಂತಿದೆ. ಇದರಲ್ಲಿ ಲಕ್ಷ್ಮೀಯ ಸ್ಪಷ್ಟವಾದಂತಹ ಶಿಲ್ಪವಿದೆ. ಇದರ ಎಡ-ಬಲದಲ್ಲಿ ಆನೆಗಳಿದ್ದು, ಅವು ತಮ್ಮ ಹಿಂಗಾಲುಗಳನ್ನು ಸ್ವಲ್ಪ ಮಡಿಚಿದಂತೆ ಮತ್ತು ತಮ್ಮ ಸೊಂಡಿಲುಳಿಂದ ಬಿಂದಿಗೆಯನ್ನು ಎತ್ತಿ ಲಕ್ಷ್ಮೀಯ ತಲೆಯ ಮೇಲೆ ನೀರು ಸುರಿಯುತ್ತಿರುವಂತೆ ಬಾಸವಾಗುತ್ತದೆ. ಇನ್ನು ಈ ಎರಡು ಆನೆಗಳ ಹಿಂಭಾಗದಲ್ಲಿ ಪೂರ್ಣಕುಂಭಗಳನ್ನು ಕಾಣುತ್ತೇವೆ.

## ಮಲ್ಲಯ್ಯನ ಮೂರ್ತಿ

ಮೂಲ ದೇವಸ್ಥಾನದ ಗರ್ಭಗೃಹದಲ್ಲಿ ಮಲ್ಲಯ್ಯನ ಮೂರ್ತಿ ಇದ್ದು, ಇದನ್ನು ಕಪ್ಪು ಗ್ರಾನೈಟ್ ಶಿಲೆಯಲ್ಲಿ ನಿರ್ಮಿಸಲಾಗಿದೆ. ಈ ಶಿಲ್ಪವು ೩.೫ ಅಡಿ ಉದ್ದ ೨.೫ ಅಡಿ ಅಗಲ ಇದ್ದು, ಜಟಭಾರ ಮುಕುಟಧಾರಿಯಾಗಿದ್ದು ಹಣೆಯಲ್ಲಿ ಕಣ್ಣನ್ನು ಹೊಂದಿದ ಮಲ್ಲಯ್ಯನು ನಾಲ್ಕು ಕೈಗಳನ್ನು ಹೊಂದಿದ್ದಾನೆ. ಈ ಕೈಗಳಲ್ಲಿ ತ್ರಿಶೂಲ, ಡಮರುಗ, ಬಾಕು, ಪಾನಪಾತ್ರೆಯನ್ನು ಹಿಡಿದಿದ್ದಾನೆ. ಕರ್ಣಕುಂಡಲ, ಬಾಹುಪೂರ, ಉರಹಾರ, ತೋಳುಬಂದಿ, ಕೈಬಳೆ, ಕಟಿಸೂತ್ರ, ಅಲಂಕಾರಯುತ ರೇಷ್ಮೆಯ ವಸ್ತ್ರವನ್ನು ಮತ್ತು ಕಾಲಿಗೆ ಕಡಗವನ್ನು ಧರಿಸಿದ್ದು, ಸಮಭಂಗಿಯಲ್ಲಿ ನಿಂತಿರುವಂತೆ ಕಂಡರಿಸಲಾಗಿದೆ.

## ಗಂಗಿಮಾಳಮ್ಮನ ಶಿಲ್ಪ

ಸಭಾ ಮಂಟಪದಲ್ಲಿ ಎಡಬದಿಯ ಗರ್ಭಗೃಹದಲ್ಲಿ ಗಂಗಿಮಾಳಮ್ಮನ ಶಿಲ್ಪವಿದೆ. ಇದುಕಪ್ಪು ಗ್ರಾನೈಟ್ ಶಿಲೆಯಲ್ಲಿ ನಿರ್ಮಿತವಾಗಿದ್ದ ಈ ಶಿಲ್ಪವು ೨.೫ ಅಡಿ ಉದ್ದ ೩ ಅಡಿ ಅಗಲ ಇದ. ಕಿರೀಟಮುಕುಟಧಾರಿಯಾದ ಗಂಗಿಮಾಳಮ್ಮ ನಾಲ್ಕು ಕೈಗಳನ್ನು ಹೊಂದಿದ್ದು, ಈ ಕೈಗಳಲ್ಲಿ ತ್ರಿಶೂಲ, ಡಮರುಗ, ಬಾಕು, ಪಾನಪಾತ್ರೆಯನ್ನು ಹಿಡಿದಿದ್ದಾಳೆ. ಕರ್ಣಕುಂಡಲ, ಉರಹಾರ, ತೋಳುಬಂದಿ, ಕೈಬಳೆ, ಕಟಿಸೂತ್ರ, ಅಲಂಕಾರಯುತ ರೇಷ್ಮೆ ವಸ್ತ್ರವನ್ನು ಮತ್ತು ಕಾಲಿಗೆ ಗೆಜ್ಜೆ ಧರಿಸಿದ್ದು, ಸುಖಾಸನದಲ್ಲಿ ಕುಳಿತಿರುವಂತೆ ಚಿತ್ರಿಸಿದ್ದಾರೆ.

## ಲಕ್ಷ್ಮಿ (ತುಪ್ಪದ ಮಾಳಮ್ಮ)

ಸಭಾ ಮಂಟಪದಲ್ಲಿ ಬಲಬದಿಯ ಗರ್ಭಗೃಹದಲ್ಲಿ ತುಪ್ಪದಮಾಳಮ್ಮನ ಶಿಲ್ಪವಿದೆ. ಇದುಕಪ್ಪು ಗ್ರಾನೈಟ್ ಶಿಲೆಯಲ್ಲಿ ನಿರ್ಮಿತವಾಗಿದ್ದು, ಈ ಶಿಲ್ಪವು ಸುಮಾರು ೩.೫ ಅಡಿ ಉದ್ದ ೨.೫ ಅಡಿ ಅಗಲ ಇದೆ. ಕಿರೀಟ ಮುಕುಟವನ್ನು ಹೊಂದಿದ ತುಪ್ಪದ ಮಾಳಮ್ಮ ನಾಲ್ಕು ಕೈಗಳನ್ನು ಹೊಂದಿದ್ದು, ಎರಡು ಕೈಗಳಲ್ಲಿ ಕಮಲವನ್ನು ಹಿಡಿದಿದ್ದಾಳೆ. ಒಂದುಕೈ ಅಭಯಹಸ್ತ, ಇನ್ನೊಂದು ವರದಹಸ್ತ ವನ್ನು ಹೊಂದಿದೆ. ಕಿವಿಯೋಲೆ, ತೋಳುಬಂದಿ, ಕೈಬಳೆ, ಕಟಿಸೂತ್ರ, ಅಲಂಕಾರಯುತ ರೇಷ್ಮೆ ವಸ್ತ್ರವನ್ನು ಮತ್ತು ಕಾಲಿಗೆ ಗೆಜ್ಜೆಯನ್ನು ಧರಿಸಿದ್ದು, ಸಮಭಂಗಿಯಲ್ಲಿ ನಿಂತಿರುವಂತೆ ಕೆತ್ತನೆ ಹೊಂದಿದೆ.

## ಶಿವನ ಮೂರ್ತಿ

ಮಲ್ಲಯ್ಯನ ದೇವಸ್ಥಾನದ ಮಹಾ ಮಂಟಪಕ್ಕೆ ಹೊಂದಿಕೊಡಿರುವ ಶಿವನ ದೇವಾಲಯದ ಗರ್ಭಗೃಹದ ಮಧ್ಯದಲ್ಲಿ ಇರುವ ಶಿವನ ಶಿಲ್ಪವು ಕಪ್ಪು ಗ್ರಾನೈಟ್ ಶಿಲೆಯಲ್ಲಿ ನಿರ್ಮಿತವಾಗಿದೆ. ಈ ಶಿಲ್ಪವು ಸುಮಾರು ೪ ಅಡಿ ಉದ್ದ ೨.೫ ಅಡಿ ಅಗಲ ಇದೆ. ಕರಂಡಮುಕುಟ ಧಾರಿಯಾದ ಶಿವನು ಕರ್ಣಕುಂಡಲ, ಬಾಹುಪೂರ, ಉರಹಾರ, ತೋಳುಬಂದಿ, ಕೈಬಳೆ, ಕಟಿಸೂತ್ರ, ಅಲಂಕಾರಯುತ ವಸ್ತ್ರವನ್ನು ಮತ್ತು ಕಾಲಿಗೆ ಕಡಗವನ್ನು ಧರಿಸಿದ್ದಾನೆ. ಸಮಭಂಗಿಯಲ್ಲಿ ನಿಂತಿದ್ದು, ನಾಲ್ಕು ಕೈಗಳನ್ನು ಹೊಂದಿದ್ದಾನೆ. ಈ ಕೈಗಳಲ್ಲಿ ತ್ರಿಶೂಲ, ಡಮರುಗ, ಬಾಕು, ಪಾನಪಾತ್ರೆಯನ್ನು ಹಿಡಿದಿದ್ದಾನೆ ಎನ್ನುವ ರೀತಿಯಲ್ಲಿ ಕಂಡರಿಸಿದ್ದಾರೆ.

**ಪಾರ್ವತಿಯ ಶಿಲ್ಪ**

ಶಿವನ ದೇವಾಲಯದ ಗರ್ಭಗೃಹದ ಮಧ್ಯದಲ್ಲಿ ಇರುವ ಶಿವನ ಎಡಭಾಗದಲ್ಲಿ ಪಾರ್ವತಿಯ ಶಿಲ್ಪವಿದೆ. ಇದನ್ನು ಕಪ್ಪು ಗ್ರಾನೈಟ್ ಶಿಲೆಯಲ್ಲಿ ಕೆತ್ತಲಾಗಿದೆ. ಈ ಶಿಲ್ಪವು ಸುಮಾರು ೪ ಅಡಿ ಉದ್ದ ೨.೫ ಅಡಿ ಅಗಲ ಇದೆ. ಪಾರ್ವತಿಯು ಕಿರೀಟಧಾರಿಯಾಗಿದ್ದು, ಕರ್ಣಕುಂಡಲ ಧರಿಸಿದ್ದು, ಭುಜಕ್ಕೆ ತಾಗಿವೆ. ಕಂಠಹಾರ, ಉರಹಾರ, ತೋಳುಬಂದಿ, ಕೈಬಳೆ, ಕಟಿಸೂತ್ರ, ಅಲಂಕಾರಯುತ ವಸ್ತ್ರವನ್ನು ಮತ್ತು ಕಾಲಿಗೆ ಗೆಜ್ಜೆಯನ್ನು ಧರಿಸಿದೆ. ಒಂದು ಕೈಯಲ್ಲಿ ಅಗ್ನಿಯನ್ನು ಹೊಂದಿದ್ದು, ಮತ್ತೊಂದು ಕೈಯಲ್ಲಿ ಇರುವುದು ಅಸ್ಪಷ್ಟತೆಯಿಂದ ಕೂಡಿದ್ದು, ಸಮಭಂಗಿಯಲ್ಲಿ ನಿಂತಿರುವಂತೆ ಕಂಡರಿಸಿದ್ದಾರೆ.

**ಷಣ್ಮುಖನಶಿಲ್ಪ**

ಮಹಾಮಂಟಪಕ್ಕೆ ಹೊಂದಿಕೊಡಿರುವ ಶಿವನ ದೇವಾಲಯದ ಗರ್ಭಗೃಹದ ಮಧ್ಯದಲ್ಲಿ ಇರುವ ಶಿವನ ಬಲಭಾಗದಲ್ಲಿ ಕರಂಡಮುಕುಟವನ್ನು ಹೊಂದಿದ ಷಣ್ಮುಖನ ಶಿಲ್ಪವು ಇದ್ದು, ಇದು ಕಪ್ಪು ಗ್ರಾನೈಟ್ ಶಿಲೆಯಲ್ಲಿ ನಿರ್ಮಿತವಾಗಿದೆ. ಈ ಶಿಲ್ಪವು ಸುಮಾರು ೪ ಅಡಿ ಉದ್ದ ೨.೫ ಅಡಿ ಅಗಲ ಹೊಂದಿದ್ದು, ಕರ್ಣಕುಂಡಲ, ಬಾಹುಪೂರ, ಕೊರಳ ಹಾರ, ಉರಹಾರ, ತೋಳುಬಂದಿ, ಕೈಬಳೆ, ಕಟಿಸೂತ್ರ, ಅಲಂಕಾರಯುತ ವಸ್ತ್ರವನ್ನು ಮತ್ತು ಕಾಲಿಗೆ ಕಡಗವನ್ನು ಧರಿಸಿದ್ದು, ಸಮಭಂಗಿಯಲ್ಲಿ ನಿಂತಿದ್ದು, ಎರಡು ಕೈಗಳನ್ನು ಹೊಂದಿದ್ದಾನೆ. ಒಂದು ಕೈಯಲ್ಲಿ ಬಾಣ, ಮತ್ತೊಂದು ಕೈಯಲ್ಲಿ ಕಟಿಸೂತ್ರವನ್ನು ಹಿಡಿದ ರೀತಿಯಲ್ಲಿ ಚಿತ್ರಿಸಿದ್ದಾರೆ.

**ನಂದಿಯ ಶಿಲ್ಪ**

ಶಿವನ ದೇವಾಲಯಕ್ಕೆ ಅಭಿಮುಖವಾಗಿ ೮ ಕಂಬಗಳ ಮಂಟಪದಲ್ಲಿ ಬೃಹತ್ ನಂದಿ ಶಿಲ್ಪವಿದೆ. ಇದು ಸುಮಾರು ೧೨ ಅಡಿ ಉದ್ದ, ೬ ಅಡಿ ಎತ್ತರ ೪ ಅಡಿ ಅಗಲ ಹೊಂದಿದೆ. ಮುಗುದಾಣ ಮತ್ತು ಕೊರಳಲ್ಲಿ ಗಂಟೆಯ ಹಾರವನ್ನು ಧರಿಸಿದ್ದು ಸುಖಾಸನದಲ್ಲಿ ಕುಳಿತಿರುವ ರೀತಿಯಲ್ಲಿ ಕೆತ್ತನೆಮಾಡಿದ್ದಾರೆ.

**ಹೆಗ್ಗಪ್ಪನ ಶಿಲ್ಪ**

ಮಲ್ಲಯ್ಯನ ದೇವಾಲಯದ ದಕ್ಷಿಣದ್ವಾರಕ್ಕೆ ಅಭಿಮುಖವಾಗಿರುವ ದೇವಾಲಯದಲ್ಲಿ ೨ ಗರ್ಭಗೃಹಗಳಿವೆ. ಮೊದಲ ಗರ್ಭಗೃಹದಲ್ಲಿ ಕಪ್ಪು ಗ್ರಾನೈಟ್ ನಲ್ಲಿ ಕೆತ್ತಿರುವ ಹೆಗ್ಗಪ್ಪನ ಮೂರ್ತಿ ಇದ್ದು ನಾಲ್ಕು ಕೈಗಳಿಂದ ಕೂಡಿದೆ. ಈ ಕೈಗಳಲ್ಲಿ ಶಂಖ, ಪಾಶ, ಬಾಕು, ಹಿಡಿದಿದ್ದು ಕರ್ಣಕುಂಡಲ, ಬಾಹುಪೂರ, ಕೊರಳ ಹಾರ, ಉರಹಾರ, ತೋಳುಬಂದಿ, ಕೈಬಳೆ, ಕಟಿಸೂತ್ರ, ಅಲಂಕಾರಯುತ ವಸ್ತ್ರವನ್ನು ಧರಿಸಿದ್ದಾನೆ. ಕಾಲಿಗೆ ಕಡಗವನ್ನು ಧರಿಸಿದ್ದು, ಸಮಭಂಗಿಯಲ್ಲಿ ನಿಂತಿರುವ ರೀತಿಯಲ್ಲಿ ಕಂಡರಿಸಿದ್ದಾರೆ.

### ಆಂಜನೇಯ ಮೂರ್ತಿ

ಗರ್ಭಗೃಹದಲ್ಲಿ ಬಿಳಿ ಗಡಸು ಕಲ್ಲಿನಲ್ಲಿ ಕೆತ್ತಿರುವ ಆಂಜನೇಯಮೂರ್ತಿ ಇದ್ದು ೨ ಕೈಗಳಿಂದ ಕೂಡಿದೆ. ಒಂದು ಕೈಯಲ್ಲಿ ಗದೆಯನ್ನು ಮತ್ತೊಂದು ಕೈಯನ್ನು ಮೇಲಕ್ಕೆ ಎತ್ತಿದ್ದು ಅಭಯಹಸ್ತದಲ್ಲಿದೆ. ಆಂಜನೇಯ ಎಡಕ್ಕೆ ಮುಖಮಾಡಿದ್ದು ಕರ್ಣಕುಂಡಲ, ಬಾಹುಪೂರ, ಕೊರಳ ಹಾರ, ಉರಹಾರ, ತೋಳುಬಂದಿ, ಕೈಬಳೆ, ಕಟಿಸೂತ್ರ, ಅಲಂಕಾರಯುತ ವಸ್ತ್ರವನ್ನು ಮತ್ತು ಕಾಲಿಗೆ ಗೆಜ್ಜೆಯನ್ನು ಧರಿಸಿದ್ದು, ಬಾಲವು ತಲೆಯ ಮೇಲ್ಭಾಗದಲ್ಲಿ ಬಂದಿರುವಂವತೆ ಚಿತ್ರಿಸಿದ್ದಾರೆ.

### ಭೈರವನ ಶಿಲ್ಪ

ದೇವಾಲಯಕ್ಕೆ ಹೊಗುವ ದಾರಿಯ ಬಲಗಡೆ ನಾಶವಾಗಿರುವ ದೇವಸ್ಥಾನದಲ್ಲಿ ಭೈರವನ ಶಿಲ್ಪವಿದೆ. ಇದನ್ನು ಕಪ್ಪು ಗ್ರಾನೈಟ್ ಶಿಲೆಯಲ್ಲಿ ನಿರ್ಮಿಸಿದ್ದಾಗಿದೆ. ಬೈರವನು ಜಟಭಾರ ಮುಕುಟಧಾರಿಯಾಗಿದ್ದು ೪ ಕೈಗಳನ್ನು ಹೊಂದಿದ್ದು ಡಮರುಗ, ಪುಷ್ಪ, ಬಟ್ಟಲನ್ನು ಹಿಡಿದಿದ್ದಾನೆ. ಮತ್ತೊಂದು ಕೈಯನ್ನು ಆಸರೆಯಂತೆ ಹಿಟ್ಟಿದ್ದಾನೆ. ಕರ್ಣಕುಂಡಲಗಳು ಭುಜಕ್ಕೆ ತಾಗಿವೆ. ಸೊಂಟಕ್ಕೆ ಪಟ್ಟಿಯನ್ನು ಧರಿಸಿದ್ದು, ಬಾಹುಪೂರ, ಹಾವಿನ ತೊಳುಬಂದಿ, ಕೊರಳಹಾರ, ಉರಹಾರ, ಕೈಬಳೆ ಕಟಿಸೂತ್ರ ಧರಿಸಿದ್ದು ಕೆಳಭಾಗದ ಕಾಲುಗಳು ತುಟಿತವಾಗಿವೆ. ಇದು ವೀರಭದ್ರನ ಅವತಾರದಿಂದ ಭೈರವನ ರೂಪಕ್ಕೆ ಬದಲಾಗಿರುವ ಚಿತ್ರಣವನ್ನು ಸೂಚಿಸುತ್ತದೆ.

### ನಂದಿಯ ಮೇಲೆ ಕುಳಿತ ಶಿವನ ಮೂರ್ತಿ

ಮಲ್ಲಯ್ಯನ ದೇವಾಲಯದ ಪಶ್ಚಿಮ ದ್ವಾರದ ಮುಂಭಾಗದ ಆವರಣದಲ್ಲಿ ನಂದಿಯ ಮೇಲೆ ಕುಳಿತಿರುವ ಶಿಲ್ಪವಿದ್ದು ಇದನ್ನು ಕಪ್ಪುಗ್ರಾನೈಟ್ ಶಿಲೆಯಲ್ಲಿ ನಿರ್ಮಿಸಲಾಗಿದೆ. ಶಿವನಿಗೆ ೪ ಕೈಗಳಿದ್ದು ಒಂದುಕೈಯಲ್ಲಿ ಡಮರು, ತ್ರಿಶೂಲ, ಇನ್ನೆರಡು ಕೈಗಳಲ್ಲಿ ನಂದಿಗೆ ಹಾಕಿರುವ ಲಗಾಮು ಹಿಡಿದಿದ್ದಾನೆ. ನಂದಿಯ ಮುಖವು ತೃಟಿತವಾಗಿದೆ. ಶಿವನು ಕಿರೀಟಧಾರಿಯಾಗಿದ್ದು ಕರ್ಣಕುಂಡಲ, ಬಾಹುಪೂರ, ಕೊರಳ ಹಾರ, ಉರಹಾರ, ತೋಳುಬಂದಿ, ಕೈಬಳೆ, ಕಟಿಸೂತ್ರ, ಅಲಂಕಾರಯುತ ವಸ್ತ್ರವನ್ನು ಮತ್ತು ಕಾಲಿಗೆ ಕಡಗವನ್ನು ಧರಿಸಿದ್ದು, ನಂದಿಯ ಮೇಲೆ ಸವಾರಿ ಮಾಡುವ ರೀತಿಯಲ್ಲಿ ಕಂಡರಿಸಿದ್ದಾರೆ.

### ಉತ್ಸವ ಮೂರ್ತಿಶಿಲ್ಪಗಳು

### ಮಲ್ಲಯ್ಯನ ಮೂರ್ತಿ

ಮೂಲ ದೇವಸ್ಥಾನದ ಗರ್ಭಗೃಹದಲ್ಲಿ ಕಿರೀಟಧಾರಿ ಯಾದ ತಾಮ್ರ ಲೊಹದ ಮಲ್ಲಯ್ಯನ ಉತ್ಸವ ಮೂರ್ತಿ ಇದ್ದು ನಾಲ್ಕು ಕೈಗಳನ್ನು ಹೊಂದಿದ್ದು, ಈ ಕೈಗಳಲ್ಲಿ ತ್ರಿಶೂಲ, ಡಮರುಗ, ಬಾಕು, ಪಾನಪಾತ್ರೆಯನ್ನು ಹಿಡಿದಿದ್ದಾನೆ. ಕರ್ಣಕುಂಡಲ, ಬಾಹುಪೂರ, ಉರಹಾರ, ತೋಳುಬಂದಿ, ಕೈಬಳೆ, ಕಟಿಸೂತ್ರ, ಅಲಂಕಾರಯುತ ರೇಷ್ಮೆವಸ್ತ್ರವನ್ನು ಮತ್ತು ಕಾಲಿಗೆ ಕಡಗವನ್ನು ಧರಿಸಿದ್ದು, ಸಮಭಂಗಿಯಲ್ಲಿ ನಿಂತಿರುವಂತೆ ಕಂಡರಿಸಲಾಗಿದೆ.

**ಗಂಗಿಮಾಳಮ್ಮನಮೂರ್ತಿ**

ಮೂಲ ದೇವಸ್ಥಾನದ ಗರ್ಭಗೃಹದಲ್ಲಿ ಕಿರೀಟವನ್ನು ಹೊಂದಿದ ತಾಮ್ರ ಲೋಹದ ಗಂಗಿಮಾಳಮ್ಮನ ಉತ್ಸವ ಮೂರ್ತಿ ಇದ್ದು ನಾಲ್ಕು ಕೈಗಳನ್ನು ಹೊಂದಿದೆ. ಈ ಕೈಗಳಲ್ಲಿ ತ್ರಿಶೂಲ, ಡಮರುಗ, ಕತ್ತಿ, ಪಾನಪಾತ್ರೆಯನ್ನು ಹಿಡಿದಿದ್ದಾಳೆ. ಕರ್ಣಕುಂಡಲ, ಉರಹಾರ, ತೋಳುಬಂದಿ, ಕೈಬಳೆ, ಕಟಿಸೂತ್ರ, ಅಲಂಕಾರಯುತ ವಸ್ತ್ರವನ್ನು ಮತ್ತು ಕಾಲಿಗೆ ಗೆಜ್ಜೆ ಧರಿಸಿದ್ದು, ಸುಖಾಸನದಲ್ಲಿ ಕುಳಿತಿರುವಂತೆ ಚಿತ್ರಿಸಿದ್ದಾರೆ. ಹಿಂಬದಿಯಲ್ಲಿ ಕಮಾನು ಇದ್ದು ಯಾಳಿ, ಹೂ-ಬಳ್ಳಿಗಳ ಅಲಂಕಾರದಿಂದ ಕೂಡಿದೆ.

**ಗಣೇಶನ ಮೂರ್ತಿ**

ಮೂಲ ದೇವಸ್ಥಾನದ ಗರ್ಭಗೃಹದಲ್ಲಿ ಕಿರೀಟವನ್ನು ಹೊಂದಿದ ಕಿರೀಟಮುಕುಟ ಧಾರಿಯಾದ ಗಣೇಶನ ತಾಮ್ರ ಲೊಹದ ಉತ್ಸವ ಮೂರ್ತಿ ಇದ್ದು ನಾಲ್ಕು ಕೈಗಳನ್ನು ಹೊಂದಿದೆ. ಈ ಕೈಗಳಲ್ಲಿ ಕರ್ಣಕುಂಡಲ, ಕಂಠಹಾರ, ಬಾಹುಪೂರ, ಉರಹಾರ, ತೋಳುಬಂದಿ, ಕೈಬಳೆ, ಕಟಿಸೂತ್ರ, ಅಲಂಕಾರಯುತ ವಸ್ತ್ರವನ್ನು ಮತ್ತು ಕಾಲಿಗೆ ಗೆಜ್ಜೆ ಧರಿಸಿದ್ದು ಸುಖಾಸನದಲ್ಲಿ ಕುಳಿತಿರುವಂತೆ ಚಿತ್ರಿಸಿದ್ದಾರೆ.

**ಸ್ಮಾರಕ ಶಿಲ್ಪಗಳು**

**ವೀರಗಲ್ಲುಗಳು**

ಕರ್ನಾಟಕದ ಶಾಸನಗಳಲ್ಲಿ ದೊರೆಯುವಂತಹ ಮೂಲ ಸಾಮಾಗ್ರಿಗಳನ್ನು ವಿಭಿನ್ನವಾದ ದೃಷ್ಟಿಯಿಂದ ವಿಶ್ಲೇಷಿದ ಯಶಸ್ಸು ಸಂಶೋಧಕ ಎಂ. ಚಿದಾನಂದಮೂರ್ತಿಯವರಿಗೆ ಸಲ್ಲುತ್ತದೆ. ಇವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'ದಲ್ಲಿ ಉಲ್ಲೇಖಿಸಿರುವ ಕೆಲವುವಿಚಾರಗಳನ್ನು ಇಲ್ಲಿಹೇಳುವುದು ಔಚಿತ್ಯವೆಂದೆನಿಸುತ್ತದೆ. ರಾಜರ ಕಾಲದಿಂದ ಕಾಲಕ್ಕೆ ಆಡಳಿತ ನಡೆಸಿರುವುದಕ್ಕೆ ಇತಿಹಾಸವೆಂಬ ಭಾವನೆ ಬಹಳ ಪ್ರಚಲಿತವಾಗಿದೆ. ಜನತೆ ಬಾಳಿಬದುಕಿದ ರೀತಿ ಅನುಸರಿಸಿದ ಧರ್ಮಬೆಳೆಸಿದ ಕಲೆ ಅವರ ಜೀವನ ಸಮಸ್ಯೆಗಳು ಅವರ ಜೀವನದ ಮೌಲ್ಯಗಳನ್ನು ಇತ್ಯಾದಿಗಳ ವಿವರಣೆಗೆ ಆ ದೇಶ ಮತ್ತು ಜನತೆಯ ಇತಿಹಾಸ.[೬೧] ಈ ರೀತಿಯ ಇತಿಹಾಸವನ್ನು ಒದಗಿಸುವಲ್ಲಿ ವೀರಗಲ್ಲುಗಳು ಬಹಳ ಪ್ರಮುಖವಾದವು.

ನಿಧನವಾದ ವ್ಯಕ್ತಿಯನ್ನು ಅಥವಾ ಸಂಸ್ಕಾರ ಮಾಡಿದ ನಿರ್ದಿಷ್ಟ ಸ್ಥಳದ ಗುರುತಿಗಾಗಿಯೋ, ಮಡಿದವರ ಸ್ಮರಣಾರ್ಥವಾಗಿಯೋ, ಕೆಲವಾರು ಸಂಕೇತಗಳನ್ನೋ, ಗುರುತುಗಳನ್ನೋ, ಒಂದು ನಿಗದಿಯಾದ ಸ್ಥಳದಲ್ಲಿ ಅಥವಾ ಸಮಾಧಿ ಮಾಡಿದ ಸ್ಥಳದಲ್ಲಿ ನೆಡುತ್ತಿದ್ದರು. ಇವು ಸಾಮನ್ಯವಾಗಿ ಆಯಾ ಪ್ರದೇಶಗಳಲ್ಲಿನ ಧರ್ಮ, ನಂಬಿಕೆ, ಸಾಮಾಜಿಕ ಪ್ರತಿಷ್ಟೆಗಳನ್ನು ಅನುಸರಿಸಿಯೇ ಬೆಳೆದಿದೆ. ಪ್ರಪಂಚದಾದ್ಯಂತ ಇಂತಹ ಸ್ಥಳಗಳ ಮೇಲೆ ತಮ್ಮದೇ ಆದಂತಹ ಸ್ಮಾರಕಗಳನ್ನು ಕಟ್ಟಿರುವುದನ್ನು ಕಾಣಬಹುದು.[೬೨]

ವೀರರು ತಮ್ಮ ಸ್ವಾರ್ಥಕ್ಕಾಗಿ ಮಡಿಯದೆ ಸಮಾಜದ ಒಳಿತಿಗಾಗಿ ಪ್ರಾಣತ್ಯಾಗ ಮಾಡಿದ್ದರಿಂದ ಇವರ ಸ್ಮರಣಾರ್ಥವಾಗಿ ಮಾಡಿರುವ ಸ್ಮಾರಕ ಶಿಲ್ಪಗಳೇ ವೀರಗಲ್ಲುಗಳು.[೩೩] ಅಂದರೆ ಇಚ್ಛಾ ಮರಣವನ್ನು ಆಹ್ವಾನಿಸಿದವರ ಗೌರವಾರ್ಥ ನೆಟ್ಟ ನಿಸಿಧಿಗಳ ಜೊತೆ ಜೊತೆಗೆ ರಣರಂಗದಲ್ಲಿ ಮಡಿದ ಯೋಧರ ವೀರಗಲ್ಲುಗಳೂ ಸೇರಿಕೊಳ್ಳತೊಡಗಿದವು ಎಂದರ್ಥ. ಯುದ್ಧವನ್ನು ತೀವ್ರವಾಗಿ ಪ್ರೀತಿಸಿ ಕೊನೆಯುಸಿರಿರುವವರೆಗೂ ಕಾದಾಡಿದ ಮಾನವಗಂಧ ಹಸ್ತಿಪಟ್ಟುಗನ, ವೈರಿ ಸೈನ್ಯಕ್ಕೆ ಕಠೋರನಾದ ಬೋಯಿಗನ ಭಾಗಿಯೂರಿನಲ್ಲಿ ವೀರಮರಣ ಹೊಂದಿದ ಸಾವಿಯಬ್ಬೆಯ ವೀರಗಲ್ಲುಗಳು ಇದಕ್ಕೆ ನಿದರ್ಶನಗಳು.[೩೪]

ಅವರು ಮಾಡಿದ ಹೋರಾಟ ಇಂದಿನ ತಮ್ಮ ದೃಷ್ಟಿಯಲ್ಲಿ ಏನಾದರೂ ಆಗಿರಲಿ, ಸಮಾಜದ ಒಳಿತಿಗಾಗಿ ಜೀವದ ಹಂಗನ್ನು ತೋರಿದ ಅವರ ಧೀಮಂತಿಕೆಯನ್ನು ನಿಷ್ಠೆ, ಸ್ವಾಮಿಭಕ್ತಿ, ಸ್ವಾಭಿಮಾನಗಳಿಂದ ಕೂಡಿದುದಾಗಿದೆ.

**ಯುದ್ಧ ಸನ್ನಿವೇಶದ ವೀರಗಲ್ಲು**

ಸಂಖ್ಯೆ : ೦೧
ಶಿಲ್ಪ : ವೀರಗಲ್ಲು
ಊರು : ತೆಕ್ಕಲಕೋಟೆ
ಸ್ಥಳ : ಮಲ್ಲಯ್ಯನ ದೇವಾಲಯದ ಪಶ್ಚಿಮ ದ್ವಾರದ ಮುಂಭಾಗದಲ್ಲಿ
ಕಾಲ : ವಿಜಯನಗರ

ಈ ವೀರಗಲ್ಲನ್ನು ಬಿಳಿ ಗಡಸು ಕಲ್ಲಿನಲ್ಲಿ ಕೆತ್ತಲಾಗಿದ್ದು, ಇದು ಸುಮಾರು ೩ ಅಡಿ ಉದ್ದ ೨ ಅಡಿ ಅಗಲವನ್ನು ಹೊಂದಿದೆ. ವೀರನು ತಲೆಗೆ ಪೇಟವನ್ನು ಸುತ್ತಿದ್ದಾನೆ. ಕರ್ಣಕುಂಡಲಗಳನ್ನು ಧರಿಸಿದ್ದು ಅವು ಭುಜಕ್ಕೆ ತಾಗಿವೆ. ವೀರನು ಕೊರಳ ಹಾರ, ತೋಳುಬಂದಿ, ಕೈಬಳೆ, ಕಾಲಿಗೆ ಕಡಗ ಹಾಕಿದ್ದಾನೆ. ಮತ್ತು ವೀರಗಚ್ಚೆಯನ್ನು ಧರಿಸಿ ಸೊಂಟದ ಪಟ್ಟಿಯನ್ನು ಕಟ್ಟಿ ಇದರಲ್ಲಿ ಕತ್ತಿಯೊಂದನ್ನು ಇಟ್ಟುಕೊಂಡಿದ್ದಾನೆ. ಒಂದು ಕೈಯನ್ನು ಮುಂದಕ್ಕೆ ಚಾಚಿ ಧನುಸ್ಸನ್ನು ಹಿಡಿದಿದ್ದು ಮತ್ತೊಂದು ಕೈಯನ್ನು ಬೆನ್ನ ಹಿಂದೆ ಇರಯವ ರೀತಿಯಲ್ಲಿದ್ದು ಅದು ತೃಟಿತವಾಗಿದೆ. ಒಂದು ಕಾಲನ್ನು ಮೂಂದಕ್ಕೆ ಮತ್ತೊಂದು ಕಾಲನ್ನು ಹಿಂದಕ್ಕೆ ಇಟ್ಟಿದ್ದಾನೆ. ಈ ಚಿತ್ರಣವನ್ನು ಗಮನಿಸಿದರೆ ವೀರನು ಬಾಣವನ್ನು ಹೊಡೆಯಲು ತನ್ನ ಬೆನ್ನ ಹಿಂದೆ ಇಟ್ಟುಕೊಂಡಿರುವ ಬಾಣಗಳನ್ನು ತೆಗೆದುಕೊಳ್ಳುತ್ತಿರುವ ರೀತಿಯಲ್ಲದೆ.

ಸಂಖ್ಯೆ : ೦೨
ಶಿಲ್ಪ : ವೀರಗಲ್ಲು
ಊರು : ತೆಕ್ಕಲಕೋಟೆ
ಸ್ಥಳ : ಮಲ್ಲಯ್ಯನ ದೇವಾಲಯದ ಪಶ್ಚಿಮ ದ್ವಾರದ ಮುಂಭಾಗದಲ್ಲಿ
ಕಾಲ : ವಿಜಯನಗರ

ಬಿಳಿ ಗಡಸು ಕಲ್ಲಿನಲ್ಲಿ ಚಿತ್ರಿಸಲಾಗಿದ್ದ ಈ ಸ್ಮಾರಕವು ಸುಮಾರು ೪ ಅಡಿ ಉದ್ದ ೨.೫ ಅಡಿ ಅಗಲ ಹೊಂದಿದ್ದು ೨ ಪಟ್ಟಿಕೆಗಳನ್ನೊಳಗೊಂಡಿದೆ. ಮೊದಲನೇ ಪಟ್ಟಿಕೆಯಲ್ಲಿ ವೀರನು ವೀರ ಶಿರಮುಡಿಯನ್ನು ಕಟ್ಟಿದ್ದು ಕಿವಿಯೋಲೆಗಳನ್ನು, ಕಂಠಹಾರ, ತೋಳುಬಂದಿ, ಕೈಬಳೆ ಹಾಕಿದ್ದಾನೆ. ಅಲ್ಲದೆ ಅಲಂಕಾರಯುತ ವಸ್ತ್ರವನ್ನು ಧರಿಸಿ ಸೊಂಟಕ್ಕೆ ಪಟ್ಟಿಯನ್ನು ಕಟ್ಟಿ ಅದರಲ್ಲಿ ಸಣ್ಣ ಕತ್ತಿಯೊಂದನ್ನು ಇಟ್ಟಿದ್ದಾನೆ. ವೀರನು ತನ್ನ ಎರಡು ಕೈಗಳನ್ನು ಮುಂದಕ್ಕೆ ಚಾಚಿ ಅಭಿಮುಖವಿರುವ ನಾಯಿಯೊಂದರ ಮುಂಗಾಲುಗಳನ್ನು ಹಿಡಿದಿದ್ದಾನೆ. ಕಾಲಿಗೆ ಕಡಗ ಧರಿಸಿದ್ದು ಒಂದುಕಾಲು ಮುಂದಕ್ಕೆ ಮತ್ತೊಂದು ಕಾಲು ಹಿಂದಕ್ಕೆ ಇಟ್ಟು ಅದರೊಂದಿಗೆ ಹೊರಾಡುತ್ತಿರುವ ರೀತಿಯಲ್ಲಿದ್ದು ೨ ನಾಯಿಯ ಚಿತ್ರಣವನ್ನು ಕಂಡರಿಸಿದ್ದಾರೆ.

ಮೇಲಿನ ಪಟ್ಟಿಕೆಯಲ್ಲಿ ವೀರನೊಬ್ಬನು ಕಿರಿಟವನ್ನು ಧರಿಸಿದ್ದು ಕಿವಿಯೋಲೆಗಳನ್ನು, ಕೊರಳಹಾರ, ತೋಳುಬಂದಿ, ಕೈಬಳೆ ಹಾಕಿದ್ದು ಕಚ್ಚೆಯನ್ನು ಹಾಕಿ ಅದಕ್ಕೆ ಅಲಂಕಾರಯುತ ಪಟ್ಟಿಯೊಂದನ್ನು ಕಟ್ಟಿದ್ದು ಕಾಲಿಗೆ ಗೆಜ್ಜೆಯನ್ನು ಧರಿಸಿದ್ದಾನೆ. ವೀರನು ತನ್ನ ೨ ಕೈಗಳನ್ನು ಮುಂಚಾಚಿ ಒಂದು ಕೈಯಲ್ಲಿ ಧನಸ್ಸು ಮತ್ತೊಂದು ಕೈಯಲ್ಲಿ ಬಾಣವನ್ನು ಹಿಡಿದುಕೊಂಡು ಎದುರಿಗೆ ಇರುವ ವ್ಯಕ್ತಿಗೆ ಬಾಣವನ್ನು ಬಿಡುತ್ತಿರುವ ರೀತಿಯಲ್ಲಿ ಚಿತ್ರಿಸಿದ್ದಾರೆ. ಮತ್ತೊಬ್ಬ ವೀರನು ಕುದುರೆಯ ಮೇಲೆ ಕುಳಿತಿದ್ದಾನೆ. ಈತನು ಕಿರೀಟವನ್ನು ಧರಿಸಿದ್ದು ಕಿವಿಯೋಲೆಗಳನ್ನು, ಕೊರಳಹಾರ, ತೋಳುಬಂದಿ, ಕೈಬಳೆ ಹಾಕಿದ್ದು ಅಲಂಕಾರಯುತ ವಸ್ತ್ರವನ್ನು ಧರಿಸಿ ಅದಕ್ಕೆ ಅಲಂಕಾರಯುತ ಪಟ್ಟಿಯೊಂದನ್ನು ಕಟ್ಟಿದ್ದು ಕಾಲಿಗೆ ಗೆಜ್ಜೆಯನ್ನು ಧರಿಸಿದ್ದಾನೆ.

ಒಂದು ಕೈಯಲ್ಲಿ ಕುದುರೆಯ ಲಗಾಮು ಮತ್ತೊಂದು ಕೈಯಲ್ಲಿ ಕತ್ತಿಯನ್ನು ಹಿಡಿದು ಎದುರಿಗೆ ಇರುವ ವ್ಯಕ್ತಿಗೆ ಬೀಸುತ್ತಿರುವ ರೀತಿಯಲ್ಲಿ ಚಿತ್ರಿಸಿದೆ. ಅದೇ ರೀತಿಯಾಗಿ ಕುದುರೆಯನ್ನು ಸಹ ಅಲಂಕರಿಸಿದ್ದು ಕುದುರೆಯ ಕೆಳಭಾಗದಲ್ಲಿ ನಾಯಿಯ ಚಿತ್ರವನ್ನು ಕಂಡರಿಸಿದ್ದಾರೆ. ಈ ಚಿತ್ರನವನ್ನು ಗಮನಿಸಿದರೆ ಸ್ಥಳಿಯ ವೀರರಿಗೂ ಮತ್ತು ಹೊರಗಿನಿಂದ ಬಂದ ಬೇಡರಿಗು ಕಾಳಗ ನಡೆಯುತ್ತಿರುವುದನ್ನು ಸೂಚಿಸುತ್ತದೆ. ಕೆಳಭಾಗದಲ್ಲಿ ವೀರ ನಾಯಿಗಳೊಂದಿಗೆ ಹೋರಾಡುತ್ತಿದ್ದಾನೆ. ಮೇಲ್ಭಾಗದಲ್ಲಿ ವೀರ ಕುದುರೆಯ ಮೇಲೆ ಕುಳಿತು ನಾಯಿಗಳೊಂದಿಗೆ ಬಂದಿರುವ ವ್ಯಕ್ತಿಯೊಂದಿಗೆ ಹೊರಾಡುತ್ತಿರುವ ಸನ್ನಿವೇಶವನ್ನು ಸೂಚಿಸುತ್ತದೆ.[೩೫]

ಸಂಖ್ಯೆ : ೦೩

ಶಿಲ್ಪ : ವೀರಗಲ್ಲು

ಊರು : ತೆಕ್ಕಲಕೋಟೆ

ಸ್ಥಳ : ಮಲ್ಲಯ್ಯನ ದೇವಾಲಯದ ಪಶ್ಚಿಮ ದ್ವಾರದ ಮುಂಭಾಗದಲ್ಲಿ

ಕಾಲ : ವಿಜಯನಗರ

ಇದನ್ನು ಸಹ ಬಿಳಿ ಗಡಸುಕಲ್ಲಿನಲ್ಲಿ ನಿರ್ಮಿಸಲಾಗಿದ್ದು ಇದು ಸುಮಾರು ೨ ಅಡಿ ಉದ್ದ ೧.೫ ಅಡಿ ಅಗಲವನ್ನು ಹೊಂದಿದೆ. ಇದರಲ್ಲಿ ಒಬ್ಬ ಪುರುಷ ಮಹಿಳೆಯೊಂದಿಗೆ ಹೋರಾಡುತ್ತಿರುವ ಚಿತ್ರಣವನ್ನು ಕಂಡರಿಸಲಾಗಿದೆ. ಪುರುಷನು ತುರುಬನ್ನು ಕಟ್ಟಿದ್ದು ಕಿವಿಯೋಲೆಗಳನ್ನು, ಕೊರಳಹಾರ, ತೋಳುಬಂದಿ, ಕೈಬಳೆ ಹಾಕಿದ್ದು ಅಲಂಕಾರಯುತ ವಸ್ತ್ರವನ್ನು ಧರಿಸಿ ಅದಕ್ಕೆ ಸೊಂಟದ ಪಟ್ಟಿಯನ್ನು ಕಟ್ಟಿದ್ದಾನೆ. ಕಾಲಿಗೆ ಕಡಗ ಹಾಕಿದ್ದಾನೆ. ತನ್ನ ಎರಡು ಕೈಗಳಲ್ಲಿ ಗುರಾಣಿಯನ್ನು ಹಿಡಿದ್ದಿದ್ದಾನೆ. ಅದೇ

ರೀತಿ ಸ್ತ್ರೀಯು ತುರುಬನ್ನು ಕಟ್ಟಿದ್ದು ಕಿವಿಯೋಲೆಗಳನ್ನು, ಕೊರಳಹಾರ, ತೋಳುಬಂದಿ, ಕೈಬಳೆ, ಕಾಲುಗೆಜ್ಜೆ, ಸುಂದರವಾದ ವಸ್ತ್ರವನ್ನು ಧರಿಸಿದ್ದು ತನ್ನ ಒಂದು ಕೈ ಹೊಟ್ಟೆಯ ಭಾಗದಲ್ಲಿ ಇದೆ. ಮತ್ತೊಂದು ಕೈಯಲ್ಲಿ ಕತ್ತಿಯನ್ನು ಹಿಡಿದಿದ್ದಾಳೆ. ಈ ದೃಶ್ಯವನ್ನು ನೋಡಿದರೆ ಮಹಿಳೆಯು ರೋಷದಿಂದ ಕತ್ತಿಯನ್ನು ಹಿಡಿದು ಎದುರುಗಿರುವ ಪುರುಷನಿಗೆ ತಿವಿಯಲು ಹೋದಾಗ ಪುರುಷನು ಗುರಾಣಿಯನ್ನು ಕತ್ತಿಗೆ ಅಡ್ಡವಾಗಿ ಹಿಡಿದು ತನ್ನನ್ನು ರಕ್ಷಿಸಿಕೊಳ್ಳುತ್ತಿರುವುದನ್ನು ಸೂಚಿಸುತ್ತದೆ.

ಸಂಖ್ಯೆ : ೦೪
ಶಿಲ್ಪ : ವೀರಗಲ್ಲು
ಊರು : ತೆಕ್ಕಲಕೋಟೆ
ಸ್ಥಳ : ಮಲ್ಲಯ್ಯನ ದೇವಾಲಯದ ಪಶ್ಚಿಮ ದ್ವಾರದ ಮುಂಭಾಗದಲ್ಲಿ
ಕಾಲ : ವಿಜಯನಗರ

ಇದು ಸುಮಾರು ೧ ಅಡಿ ಉದ್ದ ೨ ಅಡಿ ಅಗಲ ಹೊಂದಿದ್ದು ಬಿಳಿ ಗಡಸು ಕಲ್ಲಿನಲ್ಲಿ ಕೆತ್ತಲಾಗಿದೆ. ವೀರನು ಮುಂಡಾಸನ್ನು ಕಟ್ಟಿದ್ದು ಕರ್ಣಕುಂಡಲ, ಕೊರಳಹಾರ, ತೋಳುಬಂದಿ, ಕೈಬಳೆ ಹಾಕಿದ್ದು ಕಚ್ಚೆಯನ್ನು ಧರಿಸಿದ್ದು ಕಾಲಿಗೆ ಕಡಗ ಹಾಕಿದ್ದಾನೆ. ಒಂದು ಕೈಯನ್ನು ಸ್ವಲ್ಪ ಮಡಿಸಿ ಮುಂಗೈಯನ್ನು ಮೇಲಕ್ಕೆತ್ತಿ ಕತ್ತಿಯೊಂದನ್ನು ಮೇಲ್ಮುಖವಾಗಿ ಹಿಡಿದಿದ್ದಾನೆ. ಮತ್ತೊಂದು ಕೈಯನ್ನು ಸ್ವಲ್ಪ ಮುಂದಕ್ಕೆ ಚಾಚಿ ಕತ್ತಿಯನ್ನು ಕೆಳಮುಖಮಾಡಿ ಹಿಡಿದಿದ್ದಾನೆ. ಈತನಿಗೆ ಅಭಿಮುಖವಾಗಿ ವೈರಿಯು ಸಹ ಮುಂಡಾಸನ್ನು ಕಟ್ಟಿದ್ದು ಕರ್ಣಕುಂಡಲ, ಕೊರಳಹಾರ, ತೋಳುಬಂದಿ, ಕೈಬಳೆ ಹಾಕಿದ್ದು ಸುಂದರವಾದ ವಸ್ತ್ರವನ್ನು ಧರಿಸಿದ್ದು ಸೊಂಟಕ್ಕೆ ಪಟ್ಟಿಯನ್ನು ಕಟ್ಟಿದ್ದಾನೆ. ಕಾಲಿಗೆ ಕಡಗ ಹಾಕಿದ್ದಾನೆ. ಒಂದು ಕೈಯನ್ನು ಮುಷ್ಟಿಮಾಡಿ ಎದೆಯಭಾಗದಲ್ಲಿ ಇಡಿದಿದ್ದು ಮತ್ತೊಂದು ಕೈಯಲ್ಲಿ ಉದ್ದವಾದ ಖಡ್ಗವನ್ನು ಕೆಳಮುಖಮಾಡಿ ನೆಲಕ್ಕೆ ಚುಚ್ಚಿರುವ ಚಿತ್ರಣವಿದ್ದು, ಒಂದು ಕಾಲನ್ನು ಹಿಂದಕ್ಕೆ ಸ್ವಲ್ಪ ಮಡಿಚಿರುವಂತೆ ಇಟ್ಟಿದ್ದು ಮತ್ತೊಂದು ಕಾಲನ್ನು ಮುಂದಕ್ಕೆ ಇಟ್ಟಿದ್ದಾನೆ. ಈತನ ಹಿಂಬದಿಯಲ್ಲಿ ಮತ್ತೊಬ್ಬ ವೀರನ ಶಿಲ್ಪವಿದ್ದು ಅದು ತುಟಿತವಾಗಿದೆ ಆದ್ದರಿಂದ ಈ ಚಿತ್ರಣವು ಮುಂದುವರೆದಿದೆ ಎನ್ನುವುದರಲ್ಲಿ ಅನುಮಾನವಿಲ್ಲ.

ಸಂಖ್ಯೆ : ೦೫
ಶಿಲ್ಪ : ವೀರಗಲ್ಲು
ಊರು : ತೆಕ್ಕಲಕೋಟೆ
ಸ್ಥಳ : ಮಲ್ಲಯ್ಯನ ದೇವಾಲಯದ ಪಶ್ಚಿಮ ದ್ವಾರದ ಮುಂಭಾಗದಲ್ಲಿ
ಕಾಲ : ವಿಜಯನಗರ

ವೀರನು ಕುದುರೆಯ ಮೆಲೆ ಕುಳಿತು ಒಂದು ಕೈಯಲ್ಲಿ ಕುದುರೆಯ ಲಗಾಮನ್ನು, ಮತ್ತೊಂದು ಕೈಯಲ್ಲಿ ಕತ್ತಿಯನ್ನು ಹಿಡಿದು ಎದುರಿಗೆ ಇರುವ ವ್ಯಕ್ತಿಗೆ ತಿವಿದಿರುವ ಚಿತ್ರಣವಿದೆ. ಕುದುರೆಯ ಮೇಲೆ ಕುಳಿತು ವೀರನು ಕಿರೀಟವನ್ನು, ಕಿವಿಯೋಲೆಗಳನ್ನು, ಕೊರಳಹಾರ, ತೋಳುಬಂದಿ, ಕೈಬಳೆ ಹಾಕಿದ್ದು ಅಲಂಕಾರಯುತ ವಸ್ತ್ರವನ್ನು ಧರಿಸಿ ಅದಕ್ಕೆ ಅಲಂಕಾರಯುತ ಪಟ್ಟಿಯೊಂದನ್ನು ಕಟ್ಟಿದ್ದು ಕಾಲಿಗೆ ಗೆಜ್ಜೆಯನ್ನು ಧರಿಸಿದ್ದಾನೆ. ಈ ವೀರನ ಎದುರಲ್ಲಿರುವ ಶಿಲ್ಪ ಅಸ್ಪಷ್ಟತೆಯಿಂದ ಕೂಡಿದೆ. ಇದನ್ನು ಬಿಳಿ ಗಡಸುಕಲ್ಲಿನಲ್ಲಿ ಕೆತ್ತಲಾಗಿದೆ.

ಸಂಖ್ಯೆ : ೦೬
ಶಿಲ್ಪ : ವೀರಗಲ್ಲು
ಊರು : ತೆಕ್ಕಲಕೋಟೆ
ಸ್ಥಳ : ಆದಿಲಿಂಗ ದೇವಾಲಯದಲ್ಲಿ
ಕಾಲ : ವಿಜಯನಗರ

ವೀರನು ಮುಂಡಾಸನ್ನು ಕಟ್ಟಿದ್ದು ಕರ್ಣಕುಂಡಲ, ಕೊರಳಹಾರ, ತೋಳುಬಂದಿ, ಕೈಬಳೆ ಹಾಕಿದ್ದು ಕಚ್ಚೆಯನ್ನು ಧರಿಸಿ ಸೊಂಟಕ್ಕೆ ಪಟ್ಟಿಯನ್ನು ಕಟ್ಟಿ ಅದರಲ್ಲಿ ಕತ್ತಿಯನ್ನು ಇಟ್ಟಿದ್ದಾನೆ. ಕಾಲಿಗೆ ಕಡಗ ಹಾಕಿದ್ದಾನೆ. ಒಂದು ಕೈಯನ್ನು ಮುಂದಕ್ಕೆ ಚಾಚಿ ಕೈಯಲ್ಲಿ ಬಿಲ್ಲನ್ನು ಹಿಡಿದಿದ್ದು ಮತ್ತೊಂದು ಕೈಯಲ್ಲಿ ಹಿಂದಿನಿಂದ ಬಾಣವನ್ನು ಎತ್ತಿಕೊಳ್ಳುತ್ತಿರುವ ಚಿತ್ರಣವಿದೆ. ಈ ಸ್ಮಾರಕವು ೨.೫ ಉದ್ದ ೧.೫ ಅಡಿ ಅಗಲವನ್ನು ಹೊಂದಿದ್ದು ಇದಕ್ಕೆ ಆಧುನಿಕವಾಗಿ ಕೆಂಪು ಬಣ್ಣವನ್ನು ಅಚ್ಚಿದ್ದಾರೆ.

ಸಂಖ್ಯೆ : ೦೭
ಶಿಲ್ಪ : ವೀರಗಲ್ಲು
ಊರು : ತೆಕ್ಕಲಕೋಟೆ
ಸ್ಥಳ : ಚಲುವಾದಿಯವರ ದೇವಸ್ಥಾನದ ಎದುರುಗಡೆ
ಕಾಲ : ವಿಜಯನಗರ

ಈ ಸ್ಮಾರಕವನ್ನು ಬಿಳಿ ಗಡಸುಕಲ್ಲಿನಲ್ಲಿ ಕೆತ್ತಲಾಗಿದ್ದು ಇದು ಸಮಾರು ೪ ಅಡಿ ಉದ್ದ ೨ಅಡಿ ಅಗಲವನ್ನು ಹೊಂದಿದೆ. ವೀರನು ಕೇಶವನ್ನು ಕಟ್ಟಿದ್ದು, ಕರ್ಣಕುಂಡಲ, ಕೊರಳಹಾರ, ತೋಳುಬಂದಿ, ಕೈಬಳೆ ಹಾಕಿದ್ದು ಕಚ್ಚೆಯನ್ನು ಧರಿಸಿದ್ದು, ಸೊಂಟಕ್ಕೆ ಪಟ್ಟಿಯನ್ನು ಕಟ್ಟಿದ್ದಾನೆ. ಕಾಲಿಗೆ ಕಡಗ ಹಾಕಿದ್ದು ಒಂದು ಕಾಲನ್ನು ಮುಂದಕ್ಕೆ ಮತ್ತೊಂದು ಕಾಲನ್ನು ಹಿಂದಕ್ಕೆ ಇಟ್ಟಿದ್ದು ಒಂದು ಕೈಯನ್ನು ಮುಂದಕ್ಕೆ ಚಾಚಿ ಕೈಯಲ್ಲಿ ಬಿಲ್ಲನ್ನು ಹಿಡಿದಿದ್ದು ಮತ್ತೊಂದು ಕೈಯಲ್ಲಿ ಬಾಣವನ್ನು ಹಿಡಿದಿದ್ದು, ಬಾಣವನ್ನು ಬಿಲ್ಲಿಗೆ ಜೊಡಿಸಿ ಹಿಂದಕ್ಕೆ ಎಳೆದು ಬಾಣವನ್ನು ಬಿಡುವ ರೀತಿಯಲ್ಲಿ ಕಂಡರಿಸಿದ್ದಾರೆ.

## ಆತ್ಮಬಲಿ ವೀರಗಲ್ಲು

ಸಂಖ್ಯೆ : ೦೧
ಶಿಲ್ಪ : ವೀರಗಲ್ಲು
ಊರು : ತೆಕ್ಕಲಕೋಟೆ .
ಸ್ಥಳ : ಮಲ್ಲಯ್ಯನ ಮೂಲ ದೇವಸ್ಥಾನದ ಸಭಾಮಂಟಪದ ಎಡ ಮೂಲೆಯಲ್ಲಿ
ಕಾಲ : ವಿಜಯನಗರ

ಒಂದು ಕಟ್ಟೆಯಮೇಲೆ ನಾಗಶಿಲ್ಪಗಳು ಮತ್ತು ಆತ್ಮಬಲಿ ಮಾಡಿಕೊಂಡ ರುಂಡಗಳನ್ನು ಇಟ್ಟಿದ್ದಾರೆ. ಇವುಗಳನ್ನು ಕಪ್ಪುಗ್ರಾನೈಟ್ ಶಿಲೆಯಲ್ಲಿ ಕೆತ್ತಲಾಗಿದ್ದು, ಇವುಗಳ ಬಗೆಗೆ ಸ್ಥಳೀಯರು ಒಂದು ಕತೆಯನ್ನು ಹೇಳುತ್ತಾರೆ. ಕೊಂತಮಯ್ಯ ತಾತನ ತಂಗಿ ಗಂಗಿಮಾಳಮ್ಮ ಗಂಡನೊಂದಿಗೆ ಜಗಳವಾಡಿ ತವರಿಗೆ ಬಂದಿರುತ್ತಾಳೆ. ಅಣ್ಣನು ತಂಗಿಯನ್ನು ಗಂಡನ ಮನೆಗೆ ಬಿಡಲು ಅಗಿ ಹುಣ್ಣಿಮೆಯ ದಿನದಂದು

ಬಂದಿರುತ್ತಾನೆ. ಮಲ್ಲಯ್ಯ ಇದನ್ನು ಒಪ್ಪುವುದಿಲ್ಲ ಆಗ ಕೊಂತಮಯ್ಯ ತಾತ ಮತ್ತು ತನ್ನ ತಮ್ಮ ನಮ್ಮ ಹೆಣ್ಣು ಮಗಳು ನಿಮ್ಮ ಅನುಮತಿ ಇಲ್ಲದೆ ತವರಿಗೆ ಬಂದಿದ್ದು ತಪ್ಪಾಗಿದೆ. ಎಂದು ಬೇಡಿಕೊಂಡು ತಮ್ಮ ಶಿರವನ್ನು ಬಲಿ ನೀಡುತ್ತಾರೆ. ಅವರ ಶಿರವಗಳನ್ನು ಶಿಲೆಯಲ್ಲಿ ಕಂಡರಸಿ ಸಭಾಮಂಟಪದಲ್ಲಿ ಇಟ್ಟಿದ್ದಾರೆ.

ಸಂಖ್ಯೆ : ೦೨
ಶಿಲ್ಪ : ವೀರಗಲ್ಲು
ಊರು : ತೆಕ್ಕಲಕೋಟೆ
ಸ್ಥಳ : ಮೂಲ ದೇವಾಲಯದ ಪಶ್ಚಿಮ ದ್ವಾರದ ಮುಂಭಾಗದಲ್ಲಿ
ಕಾಲ : ವಿಜಯನಗರ

ಬಿಳಿ ಗಡಸು ಕಲ್ಲಿನಲ್ಲಿ ಕೆತ್ತಲಾಗಿದ್ದ ಈ ಸ್ಮಾರಕವು ಸುಮಾರು ४.೫ ಅಡಿ ಉದ್ದ ೨ ಅಡಿ ಅಗಲ ಹೊಂದಿದೆ. ಇಲ್ಲಿ ವೀರನು ಜುಟ್ಟವನ್ನು ಹಾಕಿದ್ದಾನೆ. ಕರ್ಣಕುಂಡಲ, ಕೊರಳಹಾರ, ತೋಳುಬಂದಿ, ಕೈಬಳೆ ಹಾಕಿದ್ದು ಸುಂದರವಾದ ವಸ್ತ್ರವನ್ನು ಧರಿಸಿದ್ದು, ಸೊಂಟಕ್ಕೆ ಪಟ್ಟಿಯನ್ನು ಕಟ್ಟಿದ್ದಾನೆ. ಒಂದು ಕಾಲನ್ನು ಮುಂದಕ್ಕೆ ಮತ್ತೊಂದು ಕಾಲನ್ನು ಹಿಂದಕ್ಕೆ ಇಟ್ಟಿದ್ದಾನೆ. ವೀರನು ತನ್ನ ಬಲಗೈಯನ್ನು ಸ್ವಲ್ಪ ಮಡಿಚಿ ಮೇಲಕ್ಕೆ ಎತ್ತಿ ಕೈಯಲ್ಲಿ ಕತ್ತಿ ಹಿಡಿದು ಅದರಿಂದ ತನ್ನ ಕತ್ತನ್ನು ಕತ್ತರಿಸಿಕೊಂಡ ರೀತಿಯಲ್ಲಿ ಕುತ್ತಿಗೆಯ ಮೇಲೆ ಕತ್ತಿಯನ್ನು ಮತ್ತೊಂದು ಕೈಯನ್ನು ಮೇಲಕ್ಕೆ ಎತ್ತಿ ತನ್ನ ಜುಟ್ಟವನ್ನು ಹಿಡಿದು ರುಂಡವನ್ನು ಮೇಲಕ್ಕೆ ಎತ್ತಿರುವ ರೀತಿಯಲ್ಲಿ ಕತ್ತಿಯಮೇಲೆ ರುಂಡವನ್ನು ಚಿತ್ರಿಸಿದ್ದಾರೆ.

ಸಂಖ್ಯೆ : ೦೩
ಶಿಲ್ಪ : ವೀರಗಲ್ಲು
ಊರು : ತೆಕ್ಕಲಕೋಟೆ
ಸ್ಥಳ : ಚಲುವಾದಿಯವರ ದೇವಸ್ಥಾನದ ಎದುರುಗಡೆ
ಕಾಲ : ವಿಜಯನಗರ

ಬಿಳಿ ಗಡಸುಕಲ್ಲಿನಲ್ಲಿ ಕೆತ್ತಲಾಗಿದ್ದು ಇದು ಸಮಾರು ೫ ಅಡಿ ಉದ್ದ ೧.೫ ಅಡಿ ಅಗಲವನ್ನು ಹೊಂದಿದೆ. ವೀರನು ಕೇಶವನ್ನು ಪಕ್ಕಕ್ಕೆ ಕಟ್ಟಿದ್ದು ಕರ್ಣಕುಂಡಲ, ಕೊರಳಹಾರ, ತೋಳುಬಂದಿ, ಕೈಬಳೆ ಹಾಕಿದ್ದು ವೀರನು ೨ ಕಾಲಿನ ಕೆಳಭಾದವರೆಗೂ ವಸ್ತ್ರವಿರುವಂತೆ ಕಚ್ಚೆಯನ್ನು ಧರಿಸಿದ್ದು ಸೊಂಟಕ್ಕೆ ಪಟ್ಟಿಯನ್ನು ಕಟ್ಟಿದ್ದಾನೆ. ಕಾಲಿಗೆ ಕಡಗ ಹಾಕಿದ್ದು ಒಂದು ಕಾಲನ್ನು ಮುಂದಕ್ಕೆ ಮತ್ತೊಂದು ಕಾಲನ್ನು ಹಿಂದಕ್ಕೆ ಇಟ್ಟಿದ್ದಾನೆ. ತನ್ನ ಒಂದು ಕೈಯನ್ನು ಸೊಂಟದ ಮೇಲೆ ಇಟ್ಟಿದ್ದು ಮತ್ತೊಂದು ಕೈಯಲ್ಲಿ ಮೇಲ್ಮುಖವಾಗಿ ಕತ್ತಿಯನ್ನು ಇಡಿದು ಕೈಯನ್ನು ಕುತ್ತಿಗೆಯ ಮೇಲ್ಭಾಗದಲ್ಲಿ ಬರುವಂತೆ ಮೇಲಕ್ಕೆ ಎತ್ತಿದ್ದಾನೆ. ವೀರನ ರುಂಡವು ಕತ್ತರಿಸಿದ ರೀತಿಯಲ್ಲಿ ಎಡಗೈ ಮೇಲ್ಭಾಗದಲ್ಲಿ ಚಿತ್ರಿಸಿದೆ. ಇದನ್ನು ಗಮನಿಸಿದರೆ ವೀರನು ತನ್ನ ತಲೆಯನ್ನು ಸಂಪೂರ್ಣವಾಗಿ ಕತ್ತರಿಸಿಕೊಂಡಿರುವುದನ್ನು ಸೂಚಿಸುತ್ತದೆ.

ಇದಕ್ಕೆ ಅಲ್ಲಿನ ಸ್ಥಳೀಯರು ಜಾಪಾಳ ಈರಣ್ಣ ಎಂದು ಹೆಸರಿಟ್ಟು ಇದರ ಕುರಿತು ಕಥೆಯೊಂದನ್ನು ಹೇಳುತ್ತಾರೆ. ಜಾಪಾಳ ಈರಣ್ಣ ವರವಿನ ಮಲ್ಲೇಶ್ವರನಲ್ಲಿ ವರವನ್ನು ಬೇಡಿದಾಗ ಪ್ರತಿಯಾಗಿ ಮಲ್ಲಯ್ಯ ನಿನ್ನ ಬೇಡಿಕೆ ಈಡೇರಿಸುತ್ತೇನೆ. ಆದರೆ ಒಂದು ಶರತ್ತು ನಿಮ್ಮ ಮನೆಗೆ ಬಂದ ಸೊಸೆಯರಿಗೆ ಮೊದಲು ಜನಿಸಿದ ಮಗುವಿನ ಶಿರವನ್ನು ನನಗೆ ಅರ್ಪಿಸಬೇಕು ಎಂದು ಹೇಳುತ್ತಾನೆ.

ಇದನ್ನು ಒಪ್ಪದೆ ಮಗುವಿನ ಶಿರದ ಬದಲಾಗಿ ನನ್ನ ಶಿರವನ್ನು ಕೊಡುತ್ತೇನೆ. ಎಂದು ತನ್ನ ಶಿರವನ್ನು ಮಲ್ಲಯ್ಯನಿಗೆ ಕೊಡುತ್ತಾನೆ. ಇದನ್ನು ಒಂದು ಶಿಲೆಯಲ್ಲಿ ಕಂಡರಿಸಿ ಸುತ್ತಲೂ ಗೋಡೆ ಕಟ್ಟಿಸಿ ನಿತ್ಯ ಪೂಜಿಸುತ್ತಾರೆ.

ಸಂಖ್ಯೆ : ೦೪
ಶಿಲ್ಪ : ವೀರಗಲ್ಲು
ಊರು : ತೆಕ್ಕಲಕೋಟೆ
ಸ್ಥಳ : ದೇವಸ್ಥಾನಕ್ಕೆ ಹೋಗುವ ದಾರಿಯ ಎಡಭಾಗದ ಒಂದು ಮರದ ಕೆಳಗಡೆ
ಕಾಲ : ವಿಜಯನಗರ

ಈ ವೀರಗಲ್ಲು ಇದನ್ನು ಕಪ್ಪು ಗ್ರಾನೈಟ್ ಶಿಲೆಯಲ್ಲಿ ಕೆತ್ತಲಾಗಿದೆ. ಇದು ಸುಮಾರು ೨.೫ ಅಡಿ ಉದ್ದ ೪ ಅಡಿ ಅಗಲವನ್ನು ಹೊಂದಿದ್ದು ದೇವಸ್ಥಾನದ ಆವರಣದಲ್ಲಿ ಇರುವಂತ ಮೂರ್ತಿ ಶಿಲ್ಪಗಳಲ್ಲಿ ಅತ್ಯಂತ ಮಹತ್ವವಾದ ಮತ್ತು ವಿಶೇಷವಾದಂತಹ ವೀರಗಲ್ಲು ಇದಾಗಿದೆ. ಇದರಲ್ಲಿ ೨ ಪಟ್ಟಿಕೆ ಇದ್ದು, ಮೊದಲ ಪಟ್ಟಿಕೆಯಲ್ಲಿ ಮಧ್ಯದಲ್ಲಿ ವೀರನಿದ್ದು ಈತನ ಎಡಕ್ಕೆ ೩ ಜನ ಬಲಕ್ಕೆ ೫ ಜನ ಸ್ತ್ರೀಯರು ನಿಂತಿದ್ದಾರೆ. ಎಡಭಾಗದಲ್ಲಿ ಈ ಶಿಲೆ ತುಟಿತಗೊಂಡಿರುವುದರಿಂದ ಅ ಭಾಗದಲ್ಲಿ ಇನ್ನು ಇಬ್ಬರ ಶಿಲ್ಪ ಇದ್ದಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಎಂಟುಜನ ಸತಿಯರು ತಮ್ಮ ಬಲಗೈಯನ್ನು ಕೆಳಗೆ ಬಿಟ್ಟಿದ್ದಾರೆ. ಎಡಗೈಯಲ್ಲಿ ಫಲವನ್ನು (ನಿಂಬೆ ಹಣ್ಣು) ಹಿಡಿದಂತೆ ಕಂಡುಬರುತ್ತದೆ. ಇವರ ಮಧ್ಯದಲ್ಲಿ ವೀರನು ಎರಡು ಕೈಗಳನ್ನು ಜೋಡಿಸಿ ಕೈ ಮುಗಿಯುತ್ತಿರುವಂತೆ ಸಮಭಂಗಿಯಲ್ಲಿ ನಿಂತುಕೊಂಡಿದ್ದಾನೆ. ಮೇಲ್ಭಾಗದ ಪಟ್ಟಿಕೆಯಲ್ಲಿ ಎಂಟು ಜನ ಸ್ತ್ರೀಯರು ಕೈಮುಗಿದುಕೊಂಡು ಕುಳಿತಿರುವ ಭಂಗಿಯಲ್ಲಿದ್ದಾರೆ. ಇದನ್ನು ನೋಡಿದರೆ ಉತ್ಸವದ ಸಂದರ್ಭದಲ್ಲಿ ವೀರನು ಆತ್ಮಬಲಿ ಮಾಡಿಕೊಳ್ಳುವುದಕ್ಕು ಮುಂಚೆ ಕೈಮುಗಿದು ದೇವರ ಪ್ರಾರ್ಥನೆ ಮಾಡುತ್ತಿದ್ದು, ಈತನ ಅಕ್ಕಪಕ್ಕ ಸ್ತ್ರೀಯರು ಮತ್ತು ಮೇಲ್ಭಾಗದಲ್ಲಿರುವ ಸ್ತ್ರೀಯರು ಈತನಿಗೆ ಒಳ್ಳೆಯದಾಗಲೆಂದು ಅರಸುತ್ತಿರುವ ಚಿತ್ರಣವನ್ನು ತಿಳಿಸುತ್ತದೆ.

ಸಂಖ್ಯೆ : ೦೫
ಶಿಲ್ಪ : ವೀರಗಲ್ಲು
ಊರು : ತೆಕ್ಕಲಕೋಟೆ
ಸ್ಥಳ : ದಾರಿಯ ಬಲಭಾಗಕ್ಕೆ ಕೆಳಭಾಗದಲ್ಲಿ ಶಿಥಿಲಾವಸ್ಥೆ ಹಂತದಲ್ಲಿರುವ ಚಿಕ್ಕ ದೇವಾಲಯದಲ್ಲಿ
ಕಾಲ : ವಿಜಯನಗರ

ಕಪ್ಪು ಗ್ರಾನೈಟ್ ಶಿಲೆಯಲ್ಲಿ ನಿರ್ಮಿಸಿದ್ದು ವೀರನು ಅಲಂಕಾರ ಪ್ರಿಯನಾಗಿದ್ದು ನಿಂತಿರುವ ಭಂಗಿಯಲ್ಲಿದ್ದು ಎಡಗೈಯನ್ನು ಹೊಟ್ಟೆ ಭಾಗದ ಹತ್ತಿರ ಮೇಲ್ಮುಖ ಮಾಡಿ ಸ್ವಲ್ಪ ಮೇಲಕ್ಕೆ ಎತ್ತಿ ಕೈಯಲ್ಲಿ ಲಿಂಗವಿಡಿದು, ಬಲಗೈಯನ್ನು ಸ್ವಲ್ಪ ಮೇಲಕ್ಕೆ ಎತ್ತಿ ಕೈಯಲ್ಲಿ ಕತ್ತಿಯನ್ನು ಹಿಡಿದು ಕುತ್ತಿಗೆ ಭಾಗದಲ್ಲಿ ರುಂಡವನ್ನು ಕತ್ತರಿಸಿಕೊಳ್ಳುವ ರೀತಿಯಲ್ಲಿ ಇಟ್ಟಿದ್ದಾನೆ. ಬಲಗೈ ಮೇಲ್ಭಾಗದಲ್ಲಿ ಕತ್ತರಿಸಿದ ರುಂಡದ ಚಿತ್ರನವಿದೆ.

ಈ ಆತ್ಮಬಲಿದಾನ ವೀರಗಲ್ಲುಗಳು ಮಲ್ಲಯ್ಯನ ದೇವಸ್ಥಾನದಲ್ಲಿ ಇರುವುದನ್ನು ನೋಡಿದರೆ ಪ್ರಾಚೀನದಲ್ಲಿ ಮಲ್ಲಯ್ಯನಿಗೆ ನರಬಲಿ ನೀಡುವ ಪದ್ದತಿ ಇತ್ತು ಎನ್ನುವುದು ಸ್ಪಷ್ಟವಾಗಿ ತಿಳಿದುಬರುತ್ತದೆ.

## ಮಾಸ್ತಿಗಲ್ಲುಗಳು

ಸಂಖ್ಯೆ : ೦೧
ಶಿಲ್ಪ : ಮಾಸ್ತಿಗಲ್ಲು
ಊರು : ತೆಕ್ಕಲಕೋಟೆ
ಸ್ಥಳ : ಮುಖ್ಯ ದೇವಾಲಯದ ಮುಂಭಾಗದಲ್ಲಿರುವ ಸತಿಗಲ್ಲು
ಕಾಲ : ವಿಜಯನಗರ

ಬಿಳಿ ಗಡಸು ಕಲ್ಲಿನಲ್ಲಿ ಕೆತ್ತಲಾಗಿದ್ದು ಇದು ಸುಮಾರು ೪ ಅಡಿ ಉದ್ದ ೨.೫ ಅಡಿ ಅಗಲವನ್ನು ಹೊಂದಿದೆ. ತುರುಬನ್ನು ಕಟ್ಟಿದ್ದು ಕರ್ಣಕುಂಡಲ, ಕೊರಳಹಾರ, ತೋಳುಬಂದಿ, ಕೈಬಳೆ ಹಾಕಿದ್ದು ಸುಂದರವಾದ ವಸ್ತ್ರವನ್ನು ಧರಿಸಿದ್ದು ಸೊಂಟಕ್ಕೆ ಪಟ್ಟಿಯನ್ನು ಕಟ್ಟಿದ್ದಾಳೆ. ಕಾಲಿಗೆ ಗೆಜ್ಜೆಯನ್ನು ಧರಿಸಿದ್ದು ಒಂದು ಕಾಲನ್ನು ಮುಂದಕ್ಕೆ ಮತ್ತೊಂದು ಕಾಲನ್ನು ಹಿಂದಕ್ಕೆ ಇಟ್ಟು ನಿಂತ ಭಂಗಿಯಲ್ಲಿದ್ದು ಒಂದು ಕೈಯನ್ನು ಮೇಲಕ್ಕೆತ್ತಿದ್ದು, ಮತ್ತೊಂದು ಕೈಯನ್ನು ಎದೆಯ ಭಾಗಕ್ಕೆ ಮಡಿಸಿ ಕತ್ತಿಯನ್ನು ಹಿಡಿದಿದೆ.

ಸಂಖ್ಯೆ : ೦೨
ಶಿಲ್ಪ : ಮಾಸ್ತಿಗಲ್ಲುಗಳು
ಊರು : ತೆಕ್ಕಲಕೋಟೆ
ಸ್ಥಳ : ದೇವಸ್ಥಾನಕ್ಕೆ ಹೊಗುವ ದಾರಿಯ ಬಲಭಾಗದಲ್ಲಿ ಮಣ್ಣಿನಲ್ಲಿ ಹೂತಿರುವಂತ ಸತಿಗಲ್ಲು
ಕಾಲ : ವಿಜಯನಗರ

ಇದನ್ನು ಬಿಳಿ ಗಡಸು ಕಲ್ಲಿನಲ್ಲಿ ಕೆತ್ತಲಾಗಿದ್ದು ಇದು ಮಣ್ಣಿನಲ್ಲಿ ಹೂತಿರುವುದರಿಂದ ಇದರ ಅಳತೆ ಮಾಡಲು ಸಾಧ್ಯವಾಗಿಲ್ಲ ಇದರಲ್ಲಿ ಸತಿಯ ಮುಖ ಮತ್ತು ಕೈ ಮಾತ್ರ ಕಾಣಿಸುತ್ತದೆ. ಸತಿಯು ತುರುಬನ್ನು ಕಟ್ಟಿದ್ದು ಕೈಯನ್ನು ಮೇಲಕ್ಕೆತ್ತಿರುವುದನ್ನು ಕಂಡರಿಸಲಾಗಿದೆ.

## ಇತರೆ ಶಿಲ್ಪಗಳು

ಸಂಖ್ಯೆ : ೦೧
ಊರು : ತೆಕ್ಕಲಕೋಟೆ
ಸ್ಥಳ : ಹೊಂಡದ ದಂಡೆಯ ಮೇಲಿನ ಬಂಡೆಯಲ್ಲಿ
ಕಾಲ : ವಿಜಯನಗರ

ಸ್ತ್ರೀಯು ತುರುಬನ್ನು ಕಟ್ಟಿದ್ದು ಕರ್ಣಕುಂಡಲ, ಕೊರಳಹಾರ, ತೋಳುಬಂದಿ, ಕೈಬಳೆ ಹಾಕಿದ್ದು ಸುಂದರವಾದ ವಸ್ತ್ರವನ್ನು ಧರಿಸಿದ್ದು, ಸೊಂಟಕ್ಕೆ ಪಟ್ಟಿಯನ್ನು ಕಟ್ಟಿದ್ದು ಅದರಲ್ಲಿ ಕತ್ತಿಯನ್ನು ಇಟ್ಟಿದ್ದಾಳೆ. ಕಾಲಿಗೆ ಗೆಜ್ಜೆಯನ್ನು ಧರಿಸಿದ್ದು, ೨ ಕಾಲುಗಳನ್ನು ಮಡಿಸಿ ಕುಳಿತಿದ್ದಾಳೆ. ಸ್ತ್ರೀಯು ತನ್ನ ಮುಖವನ್ನು ಎಡಕ್ಕೆ ತಿರುಗಿಸಿಕೊಂಡು ಕುಳಿತಭಂಗಿಯಲ್ಲಿ ಚಿತ್ರಿಸಿದ್ದಾರೆ.

ಸಂಖ್ಯೆ : ೦೨
ಊರು : ತೆಕ್ಕಲಕೋಟೆ
ಸ್ಥಳ : ಮುಖ್ಯ ದೇವಾಲಯದ ಮುಂದೆ ಶಿಭಾರ ಮಂಟಪದ ಕೆಳಭಾಗದಲ್ಲಿ ಎಡಕ್ಕೆ
ಕಾಲ : ವಿಜಯನಗರ

ಈ ಶಿಲ್ಪವನ್ನು ಬಿಳಿ ಗಡಸುಕಲ್ಲಿನಲ್ಲಿ ಕೆತ್ತಲಾಗಿದ್ದು ಇದು ಸುಮಾರು ೨ ಅಡಿ ಉದ್ದ ೨ ಅಡಿ ಅಗಲವನ್ನು ಹೊಂದಿದೆ. ಮೇಲ್ಭಾಗದಲ್ಲಿ ಸೂರ್ಯ, ಚಂದ್ರ ಮಧ್ಯದಲ್ಲಿರುವ ಚಿತ್ರ ಅಸ್ಪಷ್ಟವಾಗಿದೆ. ಇಲ್ಲಿ ವ್ಯಕ್ತಿಯೊಬ್ಬ ಕಟ್ಟೆಯ ಮೇಲೆ ಕೂತು ಕೊಳಲನ್ನು ನುಡಿಸುತಿದ್ದು ಈತನಬಲಕ್ಕೆ ಸಹಚರರು ಇದ್ದು ಎಡಭಾಗದಲ್ಲಿ ವ್ಯಕ್ತಿಯು ನೆಲಕ್ಕೆ ಕೈ ಊರಿ ಕುಳಿತಿದ್ದು ಈತನ ತಲೆಯಮೇಲೆ ಸರ್ಪವು ಎಡೆಬಿಚ್ಚಿ ನೆರಳು ನೀಡುತ್ತಿರುವ ಚಿತ್ರಣವಿದೆ.

ಸಂಖ್ಯೆ : ೦೩
ಊರು : ತೆಕ್ಕಲಕೋಟೆ
ಸ್ಥಳ : ಶಿಭಾರ ಮಂಟಪದ ಕೆಳಭಾಗದಲ್ಲಿ ಬಲಕ್ಕೆ
ಕಾಲ : ವಿಜಯನಗರ

ಇದನ್ನು ಬಿಳಿ ಗಡಸು ಕಲ್ಲಿನಲ್ಲಿ ಕೆತ್ತಲಾಗಿದ್ದು ಇದು ಸುಮಾರು ೩ ಅಡಿ ಉದ್ದ ೨ ಅಡಿ ಅಗಲವನ್ನು ಹೊಂದಿದೆ. ಒಬ್ಬ ವೀರನು ಕೊಳಲನ್ನು ಊದುತ್ತಿದ್ದು, ಮತ್ತೊಬ್ಬ ವೀರನು ಒಂದು ಕೈಯಲ್ಲಿ ತ್ರಿಶೂಲ ಮತ್ತೊಂದು ಕೈಯಲ್ಲಿ ಡಮರು ಹಿಡಿದಿದ್ದಾನೆ.

ಸಂಖ್ಯೆ : ೦೪
ಊರು : ತೆಕ್ಕಲಕೋಟೆ
ಸ್ಥಳ : ಪಶ್ಚಿಮ ದ್ವಾರದ ಮುಂಭಾಗದಲ್ಲಿ
ಕಾಲ : ವಿಜಯನಗರ

ಇದನ್ನು ಬಿಳಿ ಗಡಸು ಕಲ್ಲಿನಲ್ಲಿ ಕೆತ್ತಲಾಗಿದ್ದು ಇದು ಸುಮಾರು ೪ ಅಡಿ ಉದ್ದ ೨.೫ ಅಡಿ ಅಗಲವನ್ನು ಹೊಂದಿದೆ. ಇದರಲ್ಲಿ ಇಬ್ಬರು ವ್ಯಕ್ತಿಗಳು ಪೀಠದ ಮೇಲೆ ಕುಳಿತಿದ್ದು, ಕೈಮುಗಿದು ಅಂಜಲಿ ಮುದ್ರೆಯಲ್ಲಿ ಕುಳಿತಿದ್ದಾರೆ.

ಸಂಖ್ಯೆ : ೦೫
ಊರು : ತೆಕ್ಕಲಕೋಟೆ .
ಸ್ಥಳ : ಪಶ್ಚಿಮ ದ್ವಾರದ ಮುಂಭಾಗದಲ್ಲಿ
ಕಾಲ : ವಿಜಯನಗರ

ಈ ಸ್ಮಾರಕವನ್ನು ಬಿಳಿ ಗಡಸು ಕಲ್ಲಿನಲ್ಲಿ ಕೆತ್ತಲಾಗಿದ್ದು ಇದು ಸುಮಾರು ೪ ಅಡಿ ಉದ್ದ ೩ ಅಡಿ ಅಗಲವನ್ನು ಹೊಂದಿದೆ. ವೀರನು ತುರುಬನ್ನು ಕಟ್ಟಿದ್ದು, ಅಲಂಕಾರ ಪ್ರಿಯನಾಗಿದ್ದಾನೆ. ಕಚ್ಚೆಯನ್ನು ಧರಿಸಿ ನಿಂತ ಭಂಗಿಯಲ್ಲದ್ದು ತನ್ನ ಒಂದು ಕೈಯನ್ನು ಸೊಂಟದ ಮೇಲೆ ಇಟ್ಟಿದ್ದು ಮತ್ತೊಂದು ಕೈಯನ್ನು ಮೇಲಕ್ಕೆ ಎತ್ತಿದ್ದಾನೆ.

ಸಂಖ್ಯೆ : ೦೬
ಊರು : ತೆಕ್ಕಲಕೋಟೆ
ಸ್ಥಳ : ಪಶ್ಚಿಮ ದ್ವಾರದ ಮುಂಭಾಗದಲ್ಲಿರುವ
ಕಾಲ : ವಿಜಯನಗರ

ಇದನ್ನು ಬಿಳಿ ಗಡಸು ಕಲ್ಲಿನಲ್ಲಿ ಕೆತ್ತಲಾಗಿದ್ದು ಇದು ಸುಮಾರು ೧ ಅಡಿ ಉದ್ದ ೩ ಅಡಿ ಅಗಲವನ್ನು ಹೊಂದಿದೆ. ಕುದುರೆಯ ಮೇಲೆ ಕುಳಿತು ಒಂದು ಕೈಯಲ್ಲಿ ಕುದುರೆಯ ಲಗಾಮನ್ನು, ಮತ್ತೊಂದು ಕೈಯಲ್ಲಿ ಕತ್ತಿಯನ್ನು ಹಿಡಿದಿದ್ದಾನೆ. ಕೆಳಭಾಗದಲ್ಲಿ ನಾಯಿಯ ಚಿತ್ರಣವಿದೆ. ವೀರನಿಗೆ ಅಭಿಮುಖವಾಗಿ ಇಬ್ಬರು ವ್ಯಕ್ತಿಗಳು ಇದ್ದು ಒರ್ವನ ಕೈಯಲ್ಲಿ ತ್ರಿಶೂಲ, ಮತ್ತೊಂದು ಕೈಯಲ್ಲಿ ಡಮರು ಹಿಡಿದಿದ್ದಾನೆ. ಮತ್ತೊಬ್ಬ ವ್ಯಕ್ತಿ ಒಂದು ಕೈಯಲ್ಲಿ ದೀವಟಿಗೆ ಹಾಗೂ ಮೃದಂಗ ಬಾರಿಸುತ್ತಿರುವ ಚಿತ್ರಣವನ್ನು ಕಂಡರಿಸಿದ್ದಾರೆ. ಇದನ್ನು ಗಮನಿಸಿದರೆ ಮಲ್ಲಯ್ಯನು ಕುದುರೆಯ ಮೇಲೆ ಕುಳಿತು ಕೈಯಲ್ಲಿ ಭರ್ಚಿಹಿಡಿದು ಬರುತ್ತಿದ್ದಾನೆ. ತ್ರಿಶೂಲ, ಡಮರು, ಹಿಡಿದ ಗೊರವರು, ದೀವಟಿಗೆ, ಹಾಗು ಮೃದಂಗ ಭಾರಿಸುತ್ತಿರುವ ವ್ಯಕ್ತಿಗಳು ದೇವರನ್ನು ಬರಮಾಡಿಕೊಳ್ಳುತ್ತಿದ್ದಾರೆ ಎನ್ನುವ ಸಂಗತಿಯನ್ನು ಸೂಚಿಸುತ್ತದೆ.[೧೮]

ಸಂಖ್ಯೆ : ೦೭
ಊರು : ತೆಕ್ಕಲಕೋಟೆ
ಸ್ಥಳ : ಪಶ್ಚಿಮ ದ್ವಾರದ ಮುಂಭಾಗದಲ್ಲಿರುವ
ಕಾಲ : ವಿಜಯನಗರ

ಈ ಶಿಲ್ಪವನ್ನು ಬಿಳಿ ಗಡಸು ಕಲ್ಲಿನಲ್ಲಿ ಕೆತ್ತಲಾಗಿದ್ದು ಇದು ಸುಮಾರು ೨ ಅಡಿ ಉದ್ದ ೧.೫ ಅಡಿ ಅಗಲವನ್ನು ಹೊಂದಿದೆ. ಇದರಲ್ಲಿ ವೀರನು ಪೀಠದ ಮೇಲೆ ಕುಳಿತು ಕೈಮುಗಿದುಕೊಂಡು ಧ್ಯಾನಾಸಕ್ತನಾಗಿದ್ದಾನೆ. ಈತನ ಪಕ್ಕದಲ್ಲಿ ಸ್ತ್ರೀಯ ಚಿತ್ರಣವಿದ್ದು ತನ್ನ ಕೈಯಲ್ಲಿ ಚಾಮರವನ್ನು ಹಿಡಿದು ಧ್ಯಾನದಲ್ಲಿ ಕುಳಿತಿರುವ ವ್ಯಕ್ತಿಗೆ ಬೀಸುತ್ತಿರುವ ರೀತಿ ಕಂಡರಿಸಿದೆ.

ಸಂಖ್ಯೆ : ೦೮
ಊರು : ತೆಕ್ಕಲಕೋಟೆ
ಸ್ಥಳ : ಪಶ್ಚಿಮ ದ್ವಾರದ ಮುಂಭಾಗದಲ್ಲಿರುವ
ಕಾಲ : ವಿಜಯನಗರ

ಈ ಶಿಲ್ಪವನ್ನು ಬಿಳಿ ಗಡಸು ಕಲ್ಲಿನಲ್ಲಿ ಕೆತ್ತಲಾಗಿದ್ದು ಇದು ಸುಮಾರು ೪ ಅಡಿ ಉದ್ದ ೨.೫ ಅಡಿ ಅಗಲವನ್ನು ಹೊಂದಿದೆ. ಈ ವೀರಗಲ್ಲು ೨ ಪಟ್ಟಿಕೆಯಿಂದ ಕೂಡಿದೆ. ಮೊದಲನೇ ಪಟ್ಟಿಕೆಯಲ್ಲಿ ಮಧ್ಯದಲ್ಲಿ ವೀರನಿದ್ದು, ಈತನ ಅಕ್ಕಪಕ್ಕ ಇಬ್ಬಿಬ್ಬರು ಸ್ತ್ರೀಯರು ನಿಂತಿರುವರು ಒಬ್ಬರಿಗೊಬ್ಬರು ಹೆಗಲಿಗೆ ಕೈಗಳನ್ನು ಹಾಕಿಕೊಂಡು ವೀರನನ್ನು ಕರೆದೊಯ್ಯುವ ಚಿತ್ರಣವಿದೆ. ಮೇಲಿನ ಪಟ್ಟಿಕೆಯಲ್ಲಿ ವೀರನನ್ನು ಇಬ್ಬರು ಅಪ್ಸರೆಯರು ಸ್ವರ್ಗಕ್ಕೆ ಕರೆದೊಯ್ಯುವ ಚಿತ್ರಣವಿದೆ. ಇದರ ಮೇಲ್ಭಾಗದಲ್ಲಿ ಸೂರ್ಯ ಚಂದ್ರರನ್ನು ಕಂಡರಿಸಲಾಗಿದೆ.

ಸಂಖ್ಯೆ : ೦೯

ಊರು : ತೆಕ್ಕಲಕೋಟೆ

ಸ್ಥಳ : ಪಶ್ಚಿಮ ದ್ವಾರದ ಮುಂಭಾಗದಲ್ಲಿರುವ

ಕಾಲ : ವಿಜಯನಗರ

ಇದನ್ನು ಬಿಳಿ ಗಡಸು ಕಲ್ಲಿನಲ್ಲಿ ಕೆತ್ತಲಾಗಿದ್ದು ಇದು ಸುಮಾರು ೪ ಅಡಿ ಉದ್ದ ೨. ಅಡಿ ಅಗಲವನ್ನು ಹೊಂದಿದೆ. ವ್ಯಕ್ತಿಯು ಕಿರೀಟ ಧರಿಸಿದ್ದು ಅಲಂಕಾರ ಪ್ರಿಯನಾಗಿದ್ದಾನೆ. ಸೊಂಟದಲ್ಲಿ ಕತ್ತಿಯೊಂದನ್ನು ಇಟ್ಟಿದ್ದಾನೆ.

ಈ ಎಲ್ಲಾ ಮೂರ್ತಿಗಳ ಕುರಿತು ಅಲ್ಲಿನ ಸ್ಥಳೀಯರಿಗೆ ಯಾವುದೇ ರೀತಿಯ ಅರಿವಿಲ್ಲದಿರುವುದರಿಂದ ದೇವಸ್ಥಾನಕ್ಕೆ ಬಂದಂತಹ ಭಕ್ತರು ಇವುಗಳನ್ನು ದೇವರುಗಳೆಂದು ಬಾವಿಸಿ ಇವುಗಳಿಗೆ ಕುಂಕುಮ ಅರಿಶಿನ ವಿಭೂತಿ ಅಚ್ಚುವುದರ ಜೊತೆಗೆ ಅವುಗಳ ಮೇಲೆ ಎಣ್ಣೆಯನ್ನು ಸುರಿಯುತ್ತಾರೆ. ಇದರಿಂದಾಗಿ ಈ ಶಿಲ್ಪಗಳು ಅಸ್ಪಷ್ಟತೆಯಿಂದ ಕೂಡಿದ್ದು, ನಾಶವಾಗುವ ಹಂತವನ್ನು ತಲುಪಿವೆ. ಇವುಗಳನ್ನು ಸಂರಕ್ಷಿಸುವುದು ಅತ್ಯವಶ್ಯಕವಾಗಿದೆ.

## ಅಡಿಟಿಪ್ಪಣಿ

೧ ವಾಸುದೇವ ಬಡಿಗೇರ, ೨೦೧೨, ಬಳ್ಳಾರಿ ಪರಿಸರದಸಾಂಸ್ಕೃತಿಕಪರಂಪರೆ, ಪು.ಸಂ.೩೫-೩೭
೨ ಸ್ಥಳಿಯರು ನೀಡಿದ ಮಾಹಿತಿ
೩ ಅದೇ
೪ ಕನ್ನಡ ವಿ. ವಿ. ಶಾಸನ ಸಂ.೧, ಪು. ೧೩೩
೫ ಅದೇ, ಪು.ಸಂ. ೧೩೪
೬ ಅದೇ, ಪು.ಸಂ. ೧೩೨
೭ ಅನಂತರಂಗಚಾರ್. ಎನ್., ೧೯೮೪, ಭಾರತೀಯ ಶಿಲ್ಪಶಾಸ್ತ್ರದ ಸಂಕ್ಷಿಪ್ತ ಪರಿಚಯ, ಪು.೩೦೮
೮ ಎನ್. ರಾಮಕೃಷ್ಣಯ್ಯ, ೨೦೧೪, ಸಿರುಗುಪ್ಪ ತಾಲೂಕಿನ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ. ಪು.ಸಂ, ೩೦೬
೯ ದೇವರಕೊಂಡಾರೆಡ್ಡಿ, (ಕನ್ನಡ ಅನುವಾದ) ಭಾರತೀಯ ವಾಸ್ತು ವಿದ್ಯೆ, ಪು.೦೧
೧೦ ಅದೇ, ಪು.೦೫
೧೧ ಅದೇ, ಪು.೦೬
೧೨ ಅದೇ, ಪು.೦೭
೧೩ ಸಿ.ಆರ್.ಗೋವಿಂದರಾಜು, ೨೦೧೧, ಚರಿತ್ರ ಅಧ್ಯಯನ, ಪು.ಸಂ. ೮೪
೧೪ ಎನ್. ರಾಮಕೃಷ್ಣಯ್ಯ, ೨೦೧೪, ಸಿರುಗುಪ್ಪ ತಾಲೂಕಿನ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ. ಪು.ಸಂ, ೩೩೮
೧೫ ಅದೇ, ಪು.ಸಂ.೩೩೮
೧೬ ಅದೇ, ಪು.ಸಂ.೩೩೮
೧೭ ಅದೇ, ಪು.ಸಂ.೩೩೯
೧೮ ವಾಸುದೇವ ಬಡಿಗೇರ, ಪೂರ್ವೋಕ್ತ, ಪು.ಸಂ. ೩೦೪
೧೯ ಅದೇ, ಪು.ಸಂ.೩೦೪
೨೦ ಎನ್. ರಾಮಕೃಷ್ಣಯ್ಯ, ಪೂರ್ವೋಕ್ತ, ಪು.ಸಂ.೩೩೯
೨೧ ಅದೇ, ಪು.ಸಂ.೩೩೯
೨೨ ಲಿಂಗದಳ್ಳಿ ಹಾಲಪ್ಪ, ೨೦೧೫, ಬಳ್ಳಾರಿ ಪರಿಸರದ ಹಾಲುಮತ ದೈವಗಳು, ಪು.ಸಂ.೧೯೦
೨೩ ಜ್ಞಾನಾನಂದ ಜಿ., ೨೦೦೧, ಶಿಲ್ಪದರ್ಶನಸಂ.೧, ಪು.ಸಂ.೦೩
೨೪ ರಾಮಚಂದ್ರರಾವ್ ಸಾ.ಕೃ., ೧೯೯೪, ಸಂಪ್ರದಾಯ ಶಿಲ್ಪ ಕಲೆ ಶಿಲ್ಪಕಲಾ ಪ್ರಪಂಚ ತಿಪ್ಪೇಸ್ವಾಮಿ ಸಿ.ಆರ್.(ಪ್ರಸಂ), ಪು.ಸಂ.೩೫
೨೫ ಮರಿಶಾಮಾಚಾರ್.ಎನ್., ೧೯೯೪, ಶಿಲ್ಪ ಮತ್ತು ವಿಶ್ವಕರ್ಮ, ಶೀಲ್ಪಕಲಾ ಪ್ರಪಂಚ, ತಿಪ್ಪೇಸ್ವಾಮಿ ಸಿ.ಆರ್. (ಪ್ರಸಂ), ಪು.ಸಂ.೧೯
೨೬ ತಿಪ್ಪೇರುದ್ರಸ್ವಾಮಿ ಎಚ್., ೨೦೦೭, ಕರ್ನಾಟಕ ಸಮೀಕ್ಷೆ, ಪು.ಸಂ.೫೨೩
೨೭ ಜ್ಞಾನಾನಂದ ಜಿ., ೨೦೦೧, ಪೂರ್ವೋಕ್ತ, ಪು.ಸಂ.೦೩
೨೮ ಅದೇ, ಪು.ಸಂ.೦೪

೨೯ ದೇವರಕೊಂಡರೆಡ್ಡಿ, ೧೯೯೪, **ಗಂಗರ ಶಿಲ್ಪಕಲೆ, ಶಿಲ್ಪಕಲಾ ಪ್ರಪಂಚ**, ತಿಪ್ಪೇಸ್ವಾಮಿ ಸಿ.ಅರ್. (ಪ್ರ.ಸಂ) ಪು.ಸಂ.೧೭೧

೩೦ ವಿನೋದಾ ಪಾಟಿಲ್, ೨೦೦೩, **ಶಿಲ್ಪಗಳಲ್ಲಿ ಶಿವಭಕ್ತರು**, ಪು.ಸಂ.೦೧

೩೧ ಚಿದಾನಂದಮೂರ್ತಿ, ೧೯೯೯, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಪು.ಸಂ.೧೨

೩೨ ಶೇಷಶಾಸ್ತ್ರಿ ಆರ್., ೨೦೦೪, **ಕರ್ನಾಟಕದ ವೀರಗಲ್ಲುಗಳು**, ಪು.ಸಂ.೪೦೦

೩೩ ಪರಮಶಿವಮೂರ್ತಿ ಡಿ.ವಿ., **ಕನ್ನಡ ಶಾಸನ ಶಿಲ್ಪ**, ಪು.ಸಂ.೧೨

೩೪ ಷ ಶೆಟ್ಟರ್, ೧೯೯೯, **ಸಾವನ್ನುಸ್ವಾಗತಿಸಿ** – ೧ ೨೦೦೫, ಪು.ಸಂ.೧೪,

೩೫ ಸಿ.ಆರ್.ಗೋವಿಂದರಾಜು, ಪೂರ್ವೋಕ್ತ, ಪು.ಸಂ.

೩೬ ಅದೇ, ಪು.ಸಂ. ೮೭

# ಅಧ್ಯಾಯ-೪

## ಮೈಲಾರಲಿಂಗ ಪರಂಪರೆಯ ಪ್ರಾಚೀನತೆ

ಮೈಲಾರನ ಇನ್ನೊಂದು ಹೆಸರು ಮಲ್ಲಾರಿ. ಈ ಹೆಸರನ್ನು ವಿವರಿಸಲೇ ಎಂಬಂತೆ ಒಂದು ಕಥೆಯೂ ಹೆಣೆದುಕೊಂಡಿದೆ. ಅದೇ ಮಲ್ಲಾರಿ ಮಹಾತ್ಮೆ ಎಂಬ ಸಂಸ್ಕೃತ ಕಾವ್ಯ ಮಲ್ಲ ಅಥವಾ ಮಲ್ಲಾಸುರ ಎಂಬುವನು ಒಬ್ಬ ದೈತ್ಯ. ಅವನ ವೈರಿಯೂ, ಸಂಹಾರಕನೂ ಆದವನೇ ಮಲ್ಲಾರಿ. ಈ ವಿಷಯವೇ ಪುರಾಣದ ಶೈಲಿಯಲ್ಲಿ ಬರೆದ ಈ ಮಹಾತ್ಮೆಯ ಕಥಾವಸ್ತು ಅದರ ಸಂಕ್ಷಿಪ್ತ ರೂಪವಿದು. ಮಣಿಚೂಲ ಎಂಬುದೊಂದು ಪರ್ವತ. ಅಲ್ಲಿ ಧರ್ಮಸುತರಾದ ಏಳು ಜನ ಋಷಿಗಳು ತಪಸ್ಸನ್ನಾಚರಿಸುತ್ತ ತಮ್ಮ ಪರಿವಾರದೊಂದಿಗೆ ನಿಶ್ಚಿಂತೆಯಿಂದ ಇರುತಿದ್ದರು. ಈ ಮನೋಹರವಾದ ಪರ್ವತ ಒಮ್ಮೆ ಮಲ್ಲನೆಂಬ ದೈತ್ಯನ ಕ್ರೌರ್ಯಕ್ಕೆ ಬಲಿಯಾಯಿತು. ಅತಿ ಉಗ್ರರೂಪನಾದ ಈ ಅಸುರನು ತನ್ನ ರಾಕ್ಷಸ ಪರಿವಾರದೊಂದಿಗೆ ಈ ಪರ್ವತದ ಮೇಲೆ ದಾಳಿ ಮಾಡಿದನು. ಕ್ಷಣ ಮಾತ್ರದಲ್ಲಿ ಈ ಸುಂದರ ತಪೋವನ ನಾಶವಾಯಿತು. ಮದ್ದಾನೆಯ ತುಳಿತಕ್ಕೆ ತುತ್ತಾದ ಬಾಳೆಯ ಬನದಂತೆ ಅದರ ಸ್ಥಿತಿಯಾಯಿತು. ಅಸುರರು ಹೋಮಾಗ್ನಿಯನ್ನು ನಂದಿಸಿದರು. ಹೂ ಹಣ್ಣುಗಳೆಲ್ಲ ಭೂಮಿಪಾಲಾದವು. ಋಷಿಗಳು, ಋಷಿ ಪತ್ನಿಯರು, ಹಿಂಸೆಗೊಳಗಾದರು. ಆಶ್ರಮ ಹಾಳಾಯಿತು. ಗೋವುಗಳ ವಧೆಯಾಯಿತು. ಆಶ್ರಮವನ್ನು ಇಂಥ ದುಃಸ್ಥಿತಿಗೀಡುಮಾಡಿ ದೈತ್ಯರು ಅಲ್ಲಿಂದ ಕಾಲ್ದೆಗೆದರು.[೧]

ದಿಕ್ಕುಗಾಣದಂತಾದ ಋಷಿಗಳು ಅಲ್ಲಿಂದ ಇನ್ನೊಂದೆಡೆಗೆ ಹೋದರು. ತಮ್ಮ ರಕ್ಷಣೆಗೋಸ್ಕರ ಅಭಯವನ್ನು ಬೇಡಲು ಇಂದ್ರನೆಡೆಗೆ ತೆರಳಿ ಈ ಮಲ್ಲಾಸುರನನ್ನು ಸಂಹರಿಸಬೇಕೆಂದು ಪ್ರಾರ್ಥಿಸಿದರು. ಬ್ರಹ್ಮನಿಂದ ಅಜೇಯತ್ವದ ವರವನ್ನು ಪಡೆದ ಈ ದೈತ್ಯನನ್ನು, ಅವನ ತಮ್ಮನಾದ ಮಣಿಯನ್ನು ಕೊಲ್ಲುವುದು ತನ್ನಿಂದ ಅಸಾಧ್ಯವೆಂದು ಇಂದ್ರನು ಹೇಳಿ ಋಷಿಗಳು ವಿಷ್ಣುವನ್ನು ಪ್ರಾರ್ಥಿಸಬೇಕೆಂದು ಸೂಚಿಸಿದನು. ಋಷಿಗಳು ವಿಷ್ಣುವಿನ ಬಳಿ ತೆರಳಿದಾಗ ಅಲ್ಲಿಯೂ ಅವರಿಗೆ ಅಂಥದೇ ಉತ್ತರ ದೊರೆಯಿತು. ವಿಷ್ಣುವಿನ ಸೂಚನೆಯ ಮೇರೆಗೆ ಅವರು ಶಿವನ ಬಳಿಗೆ ಹೋದರು. ಕೈಲಾಸದಲ್ಲಿ ಇದ್ದ ಶಿವನನ್ನು ಪ್ರಾರ್ಥಿಸಿ ತಮ್ಮ ದೈತ್ಯ ಸ್ಥಿತಿಯನ್ನು ವಿವರಿಸಿದರು. ಋಷಿಗಳ ಮಾತನ್ನು ಕೇಳಿ ಶಿವನು ಅತ್ಯುಗ್ರನಾದನು. ಇದರ ಪರಿಣಾಮವಾಗಿ ಶಿವನ ಜಟೆಯಿಂದ ಅತ್ಯುಗ್ರ ದೇವತೆಯೊಬ್ಬಳು ಉದಿತಳಾದಳು. ಅವಳೇ ಘೃತಮಾರಿ ಆಗ ಶಿವನು ಮಾರ್ತಾಂಡ ಭೈರವನ ರೂಪವನ್ನು ಧರಿಸಿದನು. ಕೊರಳಲ್ಲಿ ಸರ್ಪಗಳು, ಕಿವಿಯಲ್ಲಿ ಕುಂಡಲಗಳು, ಕೈಗಳಲ್ಲಿ ನಾನಾವಿಧವಾದ ಆಯುಧಗಳು ಇಂಥ ಭಯಂಕರ ರೂಪವನ್ನು ತಾಳಿ ಶಿವನು ಮಣಿಮಲ್ಲರ ಸಂಹಾರಕ್ಕೆಂದು ಸನ್ನದ್ದನಾದನು. ಸ್ಕಂದನು ಅವನ ಏಳುಕೋಟಿ ಪರಿವಾರದ ನಾಯಕನಾದನು. ಮಣಿಮಲ್ಲರೊಡನೆ ಶಿವ ಕಾದಿದ ಘೋರ ಯುದ್ಧದಲ್ಲಿ ಅನೇಕ ರಾಕ್ಷಸ ಸೇನಾನಿಗಳೊಡನೆ ಮಲ್ಲನ ತಮ್ಮನಾದ ಮಣಿಯು ಮೃತನಾದನು.

ದೈತ್ಯನಾದ ಅವನು ಸದಾಕಾಲ ಶಿವನ ಸಾನಿಧ್ಯದಲ್ಲಿರುವಂತೆ ಪರಿಪರಿಯಾಗಿ ಬೇಡಿಕೊಂಡನು. ಶಿವನು ಭಕ್ತಿಗೆ ಮೆಚ್ಚಿ ಅವನ ಅಣ್ಣನಾದ ಮಲ್ಲನ ಮೇಲೆಯೂ ಕನಿಕರ ತೋರಿ ವಿಷ್ಣುವನ್ನು ಸಂಧಾನಕ್ಕೆ ಕಳುಹಿಸಿದನು. ಆದರೆ ತನ್ನ ಶಕ್ತಿಯಿಂದ ಸೊಕ್ಕಿದ ಮಲ್ಲನು ಮಾರ್ತಾಂಡ ಭೈರವನೊಡನೆ ಸೆಣೆಸಲೆಳಸಿದನು. ಈ ಘನಘೋರ ಯುದ್ಧದಲ್ಲಿ ಮಲ್ಲನು ಎಷ್ಟು ತುತ್ತಾಗಬೇಕಾಯಿತು. ಗಾಯಗೊಂಡ ಮಲ್ಲಾಸುರನ ತಲೆಯಮೇಲೆ ಭೈರವನು ತನ್ನ ಕಾಲನ್ನಿಡಲು ಅವನು ಭೈರವನನ್ನು ಸ್ತುತಿಸಿ, ಅವನ

ಹೆಸರಿನಲ್ಲಿ ತನ್ನ ಹೆಸರು ಶಾಶ್ವತವಾಗಿ ಉಳಿಯಲೆಂದು ಪ್ರಾರ್ಥಿಸಿದನು ಎಂತಲೇ ಭೈರವನಿಗೆ ಮಲ್ಲನ ಅರಿ ಎಂದರೆ ಮಲ್ಲಾರಿ ಎಂಬ ಹೆಸರು ಉಂಟಾಯಿತು.[೨] ಅಸುರರ ನಾಶದಿಂದ ಋಷಿಗಳು ನಿರ್ವಿಘ್ನರಾಗಿ ತಪಸ್ಸನ್ನು ಆಚರಿಸುವಂತಾಯಿತು. ಆಗ ಅವರು ಮಾರ್ತಾಂಡ ಭೈರವನನ್ನು ಸ್ತುತಿಸಿದರು ಅವನು ಈ ಅವತಾರವನ್ನು ಧಾರಣ ಮಾಡಿದ ಸ್ಥಳದಲ್ಲಿ ಸ್ವಯಂ ಭೂಲಿಂಗದ ರೂಪದಲ್ಲಿ ನೆಲೆಸಬೇಕೆಂದು ಪ್ರಾರ್ಥಿಸಿದರು. ಆಗ ಮಾರ್ತಾಂಡ ಭೈರವನು ಅವರ ಇಚ್ಛೆಯಂತೆ ಮಾಗ ಶೀರ್ಷಮಾಸದ ಶುದ್ಧ ಷಷ್ಠಿ ರವಿವಾರದಂದು ಶತತಾರ ನಕ್ಷತ್ರದ ಸಮಯದಲ್ಲಿ ತನ್ನ ಶಕ್ತಿ ಸ್ವರೂಪಿಯಾದ ಮಾಳಾಚಿ ದೇವಿಯೊಂದಿಗೆ ಎರಡು ಲಿಂಗಗಳ ರೂಪದಲ್ಲಿ ಉದ್ಭೂತನಾದನು. ಈ ಸ್ಥಾನವೇ ಪ್ರೇಮಪುರವೆಂದು ಹೆಸರಾಯಿತು.[೩]

ಆರಾಧನೆಗೆಂದು ಈ ದೇವನ ಮಣ್ಣಿನ ಮೂರ್ತಿಯೊಂದನ್ನು ದೇವತೆಗಳು ನಿರ್ಮಿಸಿದರು. ಅಶ್ವಾರೋಹಿಯಾದ ಈ ಮೂರ್ತಿಯ ಬಳಿಯಲ್ಲಿ ಮಲ್ಲಾಸುರನ ಮೂರ್ತಿಯನ್ನು ನಿಲ್ಲಿಸಲಾಯಿತು. ಮೃಣ್ಮಯವಾದರೂ, ತೇಜೋಮಯವಾದ ಈ ಮೂರ್ತಿಯನ್ನು ದೇವತೆಗಳು, ಯಕ್ಷರು, ಗಂಧರ್ವರು, ಕಿನ್ನರರೂ ಭಕ್ತಿಯಿಂದ ಪೂಜಿಸಿದರು. ಇದರಿಂದ ಸಂಪ್ರೀತನಾದ ಮಲ್ಲಾರಿಯು ಎಲ್ಲರಿಗೂ ಆಕ್ಷೇಪಿತ ವರಗಳನ್ನು ಕರುಣಿಸಿದನು. ಈ ಮಹಾತ್ಮೆಯನ್ನು ಪಠಿಸುವವರಿಗೆ ತನ್ನನ್ನು ಪೂಜಿಸುವವರಿಗೆ ವಾಂಛಿತ ಫಲಗಳನ್ನು ಹರಿಸಿದನು.

ಈ ಮಹಾತ್ಮೆಯ ಪುರಾಣ ಶೈಲಿಯಲ್ಲಿ ರಚಿತವಾಗಿದೆಯಷ್ಟೇ ಅಲ್ಲದೆ ಬ್ರಹ್ಮಾಂಡ ಪುರಾಣದಲ್ಲಿ ಉಕ್ತವಾಗಿದೆ. ಎಂದು ವರ್ಣಿತವಾಗಿದೆ. ಆದರೆ ಮೂಲ ಬ್ರಹ್ಮಾಂಡ ಪುರಾಣದಲ್ಲಿ ಇದು ಇಲ್ಲವೆಂದು ಮತ್ತು ಇದು ಅಷ್ಟೊಂದು ಪ್ರಾಚೀನವಾದುದಲ್ಲವೆಂದು ವಿದ್ವಾಂಸರು ಎತ್ತಿತೋರಿಸಿದ್ದಾರೆ. ೧೩ನೇ ಶತಮಾನದ ಮಧ್ಯಕಾಲದಲ್ಲಿದ್ದ ಹೇಮಾದ್ರಿ ಪಂಡಿತನೆಂಬ ಧರ್ಮಶಾಸ್ತ್ರವಿಶಾರದನು ತನ್ನ ಚತುರ್ವರ್ಗ ಚಿಂತಾಮಣಿಯಲ್ಲಿ ಈ ದೇವತೆಯನ್ನಾಗಲೀ ಅಥವಾ ತತ್ಸಂಬಂಧವಾದ ವೃತವನ್ನಾಗಲೀ ಉಲ್ಲೇಖಿಸಿಲ್ಲ. ಆದರೆ ೧೭ನೇ ಶತಮಾನದ ಆದಿಯಲ್ಲಿದ್ದ ಕಮಲಾಕರಭಟ್ಟನೆಂಬುವನು ತನ್ನ 'ನಿರ್ಣಯಸಿಂಧು'ಎಂಬ ಗ್ರಂಥದಲ್ಲಿ ಈ ಮಹಾತ್ಮೇಯನ್ನು ಉಲ್ಲೇಖಿಸುತ್ತಾನೆ. ಈ ಆಧಾರಗಳ ಮೇಲಿಂದ ೧೩ ರಿಂದ ೧೬ನೇ ಶತಮಾನಗಳ ಮಧ್ಯಕಾಲದಲ್ಲಿ ಈ ಕೃತಿಯು ರಚಿತವಾಗಿರಬೇಕೆಂದು ವಿದ್ವಾಂಸರ ಅಭಿಪ್ರಾಯವಾಗಿದೆ. ಮೈಲಾರನ ಲೋಕಪ್ರಿಯತೆ ಮತ್ತು ಪ್ರಭಾವವು ಉಚ್ಚ ಸ್ಥಿತಿಯಲ್ಲಿದ್ದಾಗ ಅವನ್ನು ಕೊಂಡಾಡಲು ಈ ಮಹಾತ್ಮೆಯು ರಚಿತವಾಯಿತೆಂದು ಹೇಳಬಹುದು.[೩]

**ಮೈಲಾರಲಿಂಗ ಪರಂಪರೆಯ ಪ್ರಾಚೀನತೆ**

ಒಂದು ಪಂಗಡದ ಪ್ರಾಚೀನತೆಯ ಅಧ್ಯಯನದಿಂದ ಮುಂದಿನ ಜನಾಂಗಕ್ಕೆ ಹಿಂದಿರುವ ಸಂಪ್ರದಾಯ, ಸಂಸ್ಕೃತಿ ಪರಿಚಯವಾಗುತ್ತದೆ. ಪಂಗಡಗಳು ಬೆಳೆದುಬಂದದಾರಿ, ಅವುಗಳಲ್ಲಿ ಆದ ರೂಪಾಂತರ ಮೊದಲಾದವುಗಳನ್ನು ಅವುಗಳ ಪ್ರಾಚೀನತೆಯ ಹಿನ್ನಲೆಯಿಂದ ನೋಡಿದಾಗ ಅವುಗಳ ಸ್ಪಷ್ಟಕಲ್ಪನೆ ನಮಗೆ ಸಿಗುತ್ತದೆ.

ಈ ರೀತಿ ಯಾವುದೇ ಒಂದು ಸಂಪ್ರದಾಯವನ್ನು ಕುರಿತು ಅಧ್ಯಯನ ಮಾಡಲು ಆಯಾ ಪಂಗಡಗಳಲ್ಲಿ ಬಂದ ಪುರಾಣ, ಐತಿಹ್ಯ, ಕಥೆ, ಕಾವ್ಯ, ನಾಟಕ ಮೊದಲಾದ ಸಾಹಿತ್ಯಿಕ ಆಕರಗಳು

ಹಾಗೂ ಆಗಿನಕಾಲದ ಶಾಸನ ತಾಮ್ರಪತ್ರ, ತಾಡವಾಲೆಗಳು, ಸಹ ಪೂರಕ ಸಾಮಾಗ್ರಿಗಳಾಗುತ್ತವೆ. ವಿಶೇಷವಾಗಿ ಕಾಲನಿರ್ಣಯದ ಸಂದರ್ಭದಲ್ಲಿ ಶಾಸನಗಳು ಪ್ರಮುಖ ದಾಖಲೆಗಳಾಗುತ್ತವೆ. ಪುರಾಣ ಐತಿಹ್ಯಗಳಲ್ಲಿ ಕಲ್ಪನೆಗಳು ಮನೆಮಾಡಿದ್ದರೆ ಶಾಸನಗಳಲ್ಲಿ ಸ್ಪಷ್ಟವಿವರಣೆ ಸಿಗುತ್ತದೆ. ಅದೇ ರೀತಿ ಆ ಸಂದರ್ಭದ ವಚನಕಾರರು, ಕವಿಗಳು, ಹಾಗೂ ದಾಸ ಶ್ರೇಷ್ಠರು ರಚಿಸಿದ ವಚನಗಳು, ಕಾವ್ಯಗಳು, ನಾಟಕಗಳು, ಭಕ್ತಿಗೀತೆಗಳು ಸಹ ಕಾಲನಿರ್ಣಯಕ್ಕೆ ಪ್ರಧಾನ ಆಕರಗಳಾಗುತ್ತವೆ. ಆಯಾ ಕಾಲದ ಜನ ಜೀವನ ಹಾಗೂ ಸಾಮಾಜಿಕ ವ್ಯವಸ್ಥೆಯನ್ನು ಅಧ್ಯಯನ ಮಾಡಲು ಇತಿಹಾಸ ತಜ್ಞರೂ ಸಹ ಈ ಆಕರಗಳನ್ನು ಪ್ರಮುಖವಾಗಿ ಗಮನಿಸುವುದರಿಂದ ಇವುಗಳ ಮಹತ್ವವನ್ನು ತಿಳಿಸುತ್ತವೆ.

ಮೈಲಾರಲಿಂಗನ ಸಂಪ್ರದಾಯ ಪ್ರಮುಖವಾಗಿ ಕಂಡುಬರುವುದು ಕ್ರಿ.ಶ. ೧೦ನೇ ಶತಮಾನದಿಂದೀಚೆಗೆ. ಅದಕ್ಕೂ ಮೊದಲು ಇದ್ದರಬಹುದಾದ ಕಲ್ಪನೆಗಳು ತುಂಬಾ ಕಡಿಮೆಯಂದೇ ಹೇಳಬಹುದು. ಏಕೆಂದರೆ ಭಾರತದಲ್ಲಿನ ಧಾರ್ಮಿಕ ಹಿನ್ನಲೆಯನ್ನು ನೋಡಿದಾಗ ಪ್ರತಿ ೫೦೦ ವರ್ಷಗಳಿಗೊಮ್ಮೆ ಪರಿವರ್ತನೆಗೊಳ್ಳುವ ಪರಿಯನ್ನು ಕಾಣಬಹುದಾಗಿದೆ. ಅದಕ್ಕೆ ಅಂದಿನ ಸಾಮಾಜಿಕ ಹಾಗೂ ರಾಜಕೀಯ ಪರಿಸ್ಥಿತಿಯೂ ಕಾರಣವಿದ್ದಿರಬಹುದು. ಇಂತಹ ಪರಿಸ್ಥಿತಿಯಲ್ಲಿ ರಾಜರ ಜೊತೆಗೆ ಧರ್ಮಗಳು ಬದಲಾದದ್ದು ವಿಶೇಷವೇನಲ್ಲ ಈ ಹಿನ್ನೆಲೆಯಲ್ಲಿ ಮೈಲಾರಲಿಂಗನ ಆರಾಧನೆ ಅತ್ಯಂತ ಪ್ರಾಚೀನವಿದ್ದರೂ ಇರಬಹುದು.[೫] ಪ್ರಮುಖವಾಗಿ ಬ್ರಹ್ಮಾಂಡ ಪುರಾಣದಲ್ಲಿ ಇದರ ಉಲ್ಲೇಖ ಬಂದಿದೆ. ಹಾಗೆಯೇ ಸ್ಕಂದ ಪುರಾಣದಲ್ಲಿ ಹಾಗೂ ಕೂರ್ಮ ಪುರಾಣದಲ್ಲಿ ಸಹ ಇದರ ಉಲ್ಲೇಖವಿದೆ. ಕಪಿಲ ಮಹಾಮುನಿಯೇ ಈ ಸಂಪ್ರದಾಯದ ಮೂಲಗುರುವೆಂದು ತಿಳಿದು ಬರುತ್ತದೆ. ಕಪಿಲನ ಕಾಲವನ್ನು ನೋಡಿದರೆ ಅದು ರಾಮಾಯಣಕ್ಕೂ ಹಿಂದಿನದಾಗುತ್ತದೆ. ಪುರಾಣಗಳಲ್ಲಿ ಉಲ್ಲೇಖಿತ ಕಾಲ ಕೃತಯುಗ. (ಆದರೆ ಪುರಾಣಗಳ ಕರ್ತೃ ಭಗವಾನ್ ವ್ಯಾಸನೆಂದು ಹೇಳುತಾರೆ. ಅಂದರೆ ಮಹಾಭಾರತದ ಕಾಲ. ವಿದ್ವಾಂಸರ ಪ್ರಕಾರ ಮಹಾಭಾರತ ನಡೆದದ್ದು ಕ್ರಿ.ಪೂ. ೩೦೦೦ ವರ್ಷಗಳಷ್ಟು ಹಿಂದೆ) ಆದರೆ ಕೇವಲ ಪುರಾಣಗಳ ಆಧಾರವನ್ನೇ ಇಟ್ಟುಕೊಂಡು ಅಲ್ಲಿ ಬಂದಿರುವ ಉಲ್ಲೇಖಗಳನ್ನೇ ಮೂಲವೆಂದು ನಂಬಿ ಈ ಸಂಪ್ರದಾಯದ ಕಾಲ ನಿರ್ಧಾರ ಕಷ್ಟಸಾಧ್ಯ. ಆದ್ದರಿಂದ ನಂಬಬಹುದಾದ ಉಲ್ಲೇಖಗಳಾದ ಶಾಸನಗಳು, ತಾಮ್ರಪತ್ರಗಳು, ಐತಿಹಾಸಿಕ ಘಟನೆಗಳ ಆಧಾರದಲ್ಲಿ ಒಂದು ನಿರ್ಧಾರಕ್ಕೆ ಬರಲು ಸಾಧ್ಯವಾಗುವುದು. ಈ ಹಿನ್ನೆಲೆಯಲ್ಲಿ ಮೈಲಾರದ ಪ್ರಾಚೀನತೆಯನ್ನು ಕುರಿತಾದ ಕೆಲವು ವಿವರಗಳನ್ನು ನೋಡುವುದು ಅವಶ್ಯಕ.

**೪.೧ ಶಾಸನಗಳು:-**

ಮೈಲಾರನ ಆರಾಧನೆಗೆ ಸಂಬಂಧಿಸಿದ ಕೆಲವು ವಿಷಯಗಳು ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಇವುಗಳಲ್ಲಿ ಬಳಕೆಯಾದ ಮೈಲಾರ ಮಾಳಾಚೀ, ಏಳ್ಕೋಟಿ, ಏಳುಕೋಟಿ ಪದಗಳು ಮೈಲಾರ ಪರಂಪರೆಯನ್ನು ಸೂಚಿಸುತ್ತವೆ. ಮೈಲಾರ ಎನ್ನುವುದು ದೇವತೆ ನೆಲೆಸಿದ ಸ್ಥಳವಾಗಿದೆ. ಬಳ್ಳಾರಿ ಜಿಲ್ಲೆ ಹೂವಿನಡಗಲಿ ತಾಲೂಕಿಗೆ ಸೇರಿದ ತುಂಗಭದ್ರಾ ನದಿಯಿಂದ ಒಂದುವರೆ ಮೈಲು ದೂರದಲ್ಲಿರುವ ಮೈಲಾರವೇ ಈ ಗ್ರಾಮವಾಗಿದೆ. ಈ ಗ್ರಾಮದ ಹೆಸರಿನಿಂದ ಮೈಲಾರದೇವರು ಪ್ರಸಿದ್ಧಿಯನ್ನು ಹೊಂದಿದ್ದಾನೆ. ಜೊತೆಗೆ ಏಳ್ಕೋಟಿ, ಮೈಲಾರಲಿಂಗ, ಮಲ್ಲಯ್ಯ ಮಾಲತೇಶ, ಗುಡ್ಡದಯ್ಯ ಇತ್ಯಾದಿ ಹೆಸರುಗಳಿಂದ ಈ ದೇವರನ್ನು ಕರೆಯಲಾಗುತ್ತದೆ. ಏಳುಕೋಟಿ ಏಳುಕೋಟಿಗೋ ಎನ್ನುವುದು ಮೈಲಾರನನ್ನು ಆರಾಧನೆ ಮಾಡುವಾಗ ಭಕ್ತರು ಘೋಷಿಸುತ್ತಾರೆ. ಆದುದರಿಂದ ಶಾಸನಗಳಲ್ಲಿಯೂ ಈ

ಪದ ಬಳಕೆಯಾಗಿದೆ. ಹೀಗಾಗಿ ಶಾಸನಗಳಲ್ಲಿ ಮೈಲಾರ ಕುರಿತು ಉಲ್ಲೇಖವಾಗಿರುವುದನ್ನು ಈ ಕೆಳಕಂಡಂತೆ ನೋಡಬಹುದಾಗಿದೆ.

೧. ಬಳ್ಳಾರಿ (ಜಿ) ಸಿರುಗುಪ್ಪ (ತಾ) ತೆಕ್ಕಲಕೋಟೆ ಗ್ರಾಮದ ಸಮೀಪವಿರುವ ಮಲ್ಲಯ್ಯನ ಗುಡ್ಡದಲ್ಲಿ ಒಂದು ಶಾಸನವಿದೆ. "ಸಕ. ವರ್ಷ ೯೩೯ನೇ ಪಿಂಗಳ ಸಂವತ್ಸರದ ಚೈತ್ರ ಬಹುಳ ೧೩ ಬೃಹಸ್ಪತಿ ವಾರದಂದು ಕ್ರಿ.ಶ. ೨೮/೩/೧೦೧೭ ರಂದು ಚಾಲುಕ್ಯರಸ ಜಗದೇಕಮಲ್ಲನ ಆಳ್ವಿಕೆಯಲ್ಲಿ ಅವನ ಸಾಮಂತನಾದ ಜಗದೇಕಮಲ್ಲ ನೊಳಂಬವಾಡಿ-ಶ್ರೀಮತ್ ಮೈಲಾರ ದೇವಂಗೆ ಬಲ್ಲಕುನ್ದೆ ಮುನ್ನೂರರೊಳಗಣ ಪಗರೆ ತಡಿಯ ಸಿರಿಯ ನೂರಂ ಸರ್ವಾಭ್ಯನ್ತ ಸಿದ್ಧಿಯಾಗೆ ಕೊಟ್ಟರೀಧರ್ಮಮಂ ಪ್ರತಿಪಾಳಿಸಿದ...."

ಅಂದರೆ ನೊಳಂಬ ಉದಯಾದಿತ್ಯನು ನೊಳಂಬವಾಡಿ-೩೨೦೦೦, ಕದಂಬಗಳಿಗೆ-೧೦೦೦, ಕೋಗಳಿ-೫೦೦, ಬಲ್ಲಕುಂದೆ-೩೦೦, ಕುಡಿಹರಲು-೭೦, ಕರವಿಡಿ-೩೦ ಯನ್ನು ಆಳುತ್ತಿದ್ದಾಗ ಮೈಲಾರದೇವರ ಪೂಜಾರ್ಥವಾಗಿ ಬಲ್ಲಕುಂದೆ ೩೦೦ ರ ಹಗರೆ ತಡಿಯ ಸಿರಿಯ ನೂರನ್ನು ದಾನವಾಗಿ ನೀಡುತ್ತಾನೆ.

ಸಧ್ಯದಮಟ್ಟಿಗೆ ಮೈಲಾರಲಿಂಗನನ್ನು ಕುರಿತಂತೆ ಅತ್ಯಂತ ಪ್ರಾಚೀನವಾದ ಶಾಸನೋಲ್ಲೇಖ ಇದಾಗಿದೆ.

೨. "ಕ್ರಿ.ಶ. ೧೦೧೯ ರಲ್ಲಿ ಹುಟ್ಟಿದ ವೆಲುಪಗೊಂಡ (ಆಂಧ್ರ ಪ್ರದೇಶದ ಸಂಗಾರೆಡ್ಡಿ ಜಿಲ್ಲೆಯ ಜೊಗೀಪೇಟೆ ತಾಲೂಕು) ದ ಶಾಸನದಲ್ಲಿರುವ ದೇವಸ್ಥಾನದ ಉಲ್ಲೇಖವೇ ನಂತರದ ಪ್ರಾಚೀನವಾದುದು" ಎಂದು ಅಭಿಪ್ರಾಯಿಸಲಾಗಿದೆ. ಆ ಶಾಸನದ ಪಠ್ಯ ಹೀಗಿದೆ. "ಶ್ರೀ ಮನುಮಹಾಮಂಡಳೇಶ್ವರ ಸೋಮಪೆರ್ಮಾಡಿಗಳು ಸವಲಕ್ಕೆಯು ಮುಕಂದ ಮೂವನ್ನೂರನಾಳುತ್ತಂ ವೆಲುಪಗೊಂಡೆಯದಮೈಳಾರದೇವರಿಗೆ ಹೆಗ್ಗಡೆ.... ಪೆಬ.... ಕನುಂ.... ಊರ.... ನಭೋ.... ಬಮಕ.... ಮಾ.... ದರು ದೇವರ.... ನಿವೇದ್ಯಕ್ಕದಾಯಿ ಕೊಟ್ಟ.... ಮತ್ತರೊಂದು". ಮೈಲಾರಲಿಂಗನ ದೇವಾಲಯವಿದ್ದ ಬಗ್ಗೆ ನಿರ್ದಿಷ್ಟವಾದ ಶಬ್ಧಗಳಲ್ಲಿ ತಿಳಿಸುವ ಶಾಸನವಿದು.[೬]

೩. ಕೇಶವಯ್ಯನ ಕೋಟವುಮಚನಿ ದಾನ ಶಾಸನ ಕ್ರಿ.ಶ. ೧೦೧೨ ಡಿಸೆಂಬರ್ ೨೩ ರಂದು ಚಾಲುಕ್ಯ ಸಾಮ್ರಾಜ್ಯ ತ್ರಿಭುವನಮಲ್ಲ ವಿಕ್ರಮಾದಿತ್ಯನ ಮಹಾಸಾಮಂತ ಕೇಶವಯ್ಯನು ಉಮಚಗಿ (ಗದಗ ಜಿಲ್ಲೆ) ಸಮೀಪದ ರೋಣದಲ್ಲಿ ಮೌನರ ಶ್ರೀಧರ ಭಟ್ಟರಿಗೆ ಅಗ್ರಹಾರ ಕಟ್ಟಿಸಿಕೊಟ್ಟನು. ಶ್ರೀಧರ ಭಟ್ಟನು ಅದರಲ್ಲಿಯ ಹನ್ನೆರಡು ಮತ್ತರು ಭೂಮಿಯನ್ನು ಏಳುಕೋಟಿ ತಪೋಧನರ ಭೋಜನಕ್ಕಾಗಿ ಕೊಟ್ಟನೆಂದು ಕೋಟವುಮಚನಿಯ ಕನ್ನಡ ಶಾಸನದಲ್ಲಿ ಹೇಳಲಾಗಿದೆ.[೭] ಅದರಲ್ಲಿನ ಏಳುಕೋಟಿ ಶಬದ್ಧವು ಮೈಲಾರನ ಉಪಾಸಕರಿಗೆ ಸಂಬಂಧಿಸಿದ್ದು. ಏಳುಕೋಟಿ ತಪೋಧನರೆಂದರೆ ಮೈಲಾರನ ಉಪಾಸಕರೆಂದು ಜಿ.ಎಚ್. ಖರೇ ಅವರು ಅಭಿಪ್ರಾಯ ಪಡುತ್ತಾರೆ.

೪. ಹಾವೇರಿ ಜಿಲ್ಲೆಯ ದೇವಿ ಹೊಸೂರಿನ ಎರಡು ಶಾಸನ (೧೦೬೩, ೧೧೪೯) ಗಳು ಮಾಳಚಿದೇವಿಯ ದೇವಸ್ಥಾನದ ಬಗ್ಗೆ ಉಲ್ಲೇಖಿಸುತ್ತವೆ. ಕ್ರಿ.ಶ. ೧೧೪೯ ರ ಶಾಸನವು

"ಮಾಲಚಾದೇವಿಯಬಡಗಳು" ಎಂದು ಉಲ್ಲೇಖಿಸಿದೆ. ಇಲ್ಲಿನ ಮಾಳಚಾ ಎಂಬುದು ಮರಾಠಿಯ ಮಾಳಸಾ ಎಂಬುದಂತೂ ಸ್ಪಷ್ಟ.[೮]

೫. ಮುರಗೋಡದ (ಪರಸಗಡ-ಬೆಳಗಾಂವ) ಬೆಟ್ಟದ ಈರಣ್ಣನ ದೇವಸ್ಥಾನದ ಸಮೀಪದಲ್ಲಿರುವ ಕನ್ನಡ ಶಾಸನದಲ್ಲಿ, ೨೪ ಡಿಸೆಂಬರ್ ೧೧೮೫ ರಂದು ಕೊಟ್ಟ ದಾನದ ವಿವರವಿದೆ. ಅದರಲ್ಲಿ 'ಮೈಳಾರಶಕ್ತಿ' ಎಂಬ ಉಲ್ಲೇಖವಿದ್ದು, ಇದು ಮೈಲಾರ ಹೆಸರಿನ ವ್ಯಕ್ತಿನಾಮವನ್ನು ಸೂಚಿಸುತ್ತದೆ.[೯]

೬. ಮಲ್ಹಾರ (ವಿಲಾಸಪುರ-ಮಧ್ಯಪ್ರದೇಶ) ಮತ್ತು ರತನಪುರದಲ್ಲಿರುವ ಕ್ರಮವಾಗಿ ಕ್ರಿ.ಶ. ೧೧೬೭-೬೮ ಮತ್ತು ಕ್ರಿ.ಶ. ೧೧೬೩-೬೪ ರ ಎರಡು ಚೇದಿವಂಶದ ಶಾಸನಗಳಲ್ಲಿ 'ಮಲ್ಲಾಲಪತ್ತನ' ವೆಂದುಮೈಲಾರ ಕ್ಷೇತ್ರದ ಉಲ್ಲೇಖವಿದೆ. (ಮಧ್ಯಪ್ರದೇಶದಲ್ಲಿ ಮಲ್ಹಾರ ಹೆಸರಿನ ಊರಿದೆ).[೧೦]

೭. ಬೀದರ ಜಿಲ್ಲೆಯಲ್ಲಿರುವ ಅಣದೂರಿನ ಶಾಸನದಲ್ಲಿ ಚಾಲುಕ್ಯ ೨ನೇ ಜಗದೇಕಮಲ್ಲನು (ಕ್ರಿ.ಶ. ೧೧೩೯-೧೧೪೯) ತನ್ನ ಪಟ್ಟಾಭಿಷೇಕದ ಶುಭಸಂದರ್ಭದಲ್ಲಿ ಮಹಾಭೈರವ ಮೈಳಾರ ದೇವರಿಗೆ ಕೆಲವೊಂದು ದತ್ತಿ ನೀಡಿ ದೇವಾಲಯದ ಶಿಖಾರವನ್ನು ನಿರ್ಮಿಸಿದನೆಂದು ಹೇಳಲಾಗಿದೆ.[೧೧]

೮. ಬಳ್ಳಾರಿ ಜಿಲ್ಲೆಯ ಹಡಗಲಿ ತಲೂಕಿನ ಸೋಗಿಯಲ್ಲಿರುವ ಕಲ್ಲೇಶ್ವರ ದೇವಾಲಯದ ಮುಖಮಂಟಪದ ಮೇಲಿನ ೨ ಮಾರ್ಚ್ ೧೨೨೬ ರ ಕನ್ನಡ ಶಾನವೊಂದರಲ್ಲಿ ಮೈಲಾರದೇವ. ಮಲ್ಲಯ್ಯ ಹೆಗ್ಗಡೆ ಮತ್ತು ಇತರರು ಸೋಗಿಯ ಕಲಿದೇವರಿಗೆ ದಾನಕೊಟ್ಟ ವಿವರವಿದೆ.

೯. ಕ್ರಿ.ಶ. ೧೨೦೭ ಜುಲೈ ೮ ರ ಬಳ್ಳಾರಿ ಜಿಲ್ಲೆಯ ಕುಡಿತಿನಿ ಶಾಸನದಲ್ಲಿ "ಸ್ವಾಮಿ ಕಾರ್ತಿಕೇಯ ತಪೋವನಾಧಿಪತಿಯಪ್ಪ ವಿಷ್ಣುಕರ ಬ್ರಹ್ಮಚಾರಿ ಮುಖ್ಯಸ್ಥನ ದಯ್ದು ವರ್ಗಮುಂ ಶ್ರೀ ಏಳ್ಕೋಟಿ ಮಹಾದೇವರುಂ ಅಸಂಖ್ಯಾತ ಗಣಂಗಳುಂ ಮುಂಮುರಿ ದಂಡಂಗಳುಂ ನೆರೆದು ಮಾಡಿದಾಜ್ಞೆಯ ಸಾಸನೆಂತೆಂದಡೆ" ಎಂಬ ಹೇಳಿಕೆಯಿದೆ. ಇಲ್ಲಿ ಶ್ರೀ ಏಳ್ಕೋಟಿ ಮಹಾದೇವ ಎಂದರೆ ಮೈಲಾರದೇವರಿಗೆ ಸಂಬಂಧಪಟ್ಟ ತಪಸ್ವಿ ಅಥವಾ ಗೊರವನಾಗಿರಬೇಕು. ಕನಿಷ್ಟಪಕ್ಷ ಮೈಲಾರದ ಸಂಪ್ರದಾಯವನ್ನು ಪ್ರತಿನಿಧಿಸುವ ಒಬ್ಬ ಗಣ್ಯನಾದ ವ್ಯಕ್ತಿ ಎಂಬುದಂತೂ ಸ್ಪಷ್ಟವಿದೆ. ನ್ಯಾಯ ನಿರ್ಣಯದಂಥ ಮಹತ್ವದ ಕಾರ್ಯಗಳಲ್ಲಿ ಗಮನಾರ್ಹ ವ್ಯಕ್ತಿಯಾಗಿದ್ದನೆಂಬುದೂ, ಇತರರ ಗೌರವಕ್ಕೆ ಅವನು ಪಾತ್ರನಾಗಿದ್ದನೆಂಬುದೂ ಇದರಿಂದ ವ್ಯಕ್ತವಾಗಿದೆ.[೧೨]

೧೦. ಬಳ್ಳಾರಿ ಜಿಲ್ಲೆಯ ಹೂವಿನಡಗಲಿ ತಾಲೂಕಿನ ಮೈಲಾರಗ್ರಾಮದ ಮೈಲಾರಲಿಂಗ ದೇವಾಲಯದ ರಂಗಮಂಟಪದ ಮುಂಬದಿಯ ದಕ್ಷಿಣ ಕಂಬದ ಉತ್ತರ ಮುಖವಾಗಿರುವ ಶಾಸನ (ಕಾಲದ ಉಲ್ಲೇಖವಿಲ್ಲ) ದಲ್ಲಿ ಗಂಗಣನು ಮೈಲಾರ ದೇವರಿಗೆ ಹೊಸದಾಗಿ ರಂಗಮಂಟಪ. ಚಿತ್ರತೋರಣ, ವಾತಾಯನ ಹಾಗೂ ವಿವಿಧ ದೇವರುಗಳನ್ನು ಒಳಗೊಂಡ ಮಂಟಪವನ್ನು ಕಟ್ಟಿಸಿದನು. ೧೦ನೇ ಸಾಲಿನಲ್ಲಿ "ಮಾಲಾಚೀಪತಿರೀಶ್ವರ ಮೈಲಾರೇತಿ ಪ್ರಸಿದ್ಧೋಯಂ" ಎಂಬ ಉಲ್ಲೇಖವನ್ನು ಗಮನಿಸಿದರೆ ಮೈಲಾರನನ್ನು ಮಾಲ[ಳ]ಚೀಪತಿ ಎಂದು ಕರೆಯಲಾಗಿದೆ.

೧೧. ಅದೇ ದೇವಾಲಯದ ಅದೇ ಕಂಬದ ಪೂರ್ವಾಭಿಮುಖವಾಗಿರುವ ಶಾಸನದಲ್ಲಿ ಮೈಲಾರನನ್ನು "ಮಲ್ಲಾರಿಶಂಕರ" ಎಂದು ಕರೆಯಲಾಗಿದೆ.

೧೨. ಅದೇ ದೇವಾಲಯದ ಪ್ರಕಾರದ ಈಶಾನ್ಯ ದಿಕ್ಕಿನಲ್ಲಿ ಬಿದ್ದಿರುವ ಶಾ.ಶ. ೧೩೩೪ ರ ಶಿಲಾ ಶಾಸನದಲ್ಲಿ ಮೈಲಾರದೇವರ ಭಂಡಾರಿಯಾದ ನಾಗರಸನ ಮಗ ರಂಗರಸನು ಮಾಳಲದೇವಿಗೆ ಸುಖನಾಸಿ ಮತ್ತು ನವರಂಗ ಮಂಟಪಗಳನ್ನು ಕಟ್ಟಿಸಿದ್ದನ್ನು ತಿಳಿಸುತ್ತದೆ.

೧೩. ಮೈಲಾರ-ಮಾಳಚಿ ವಿಗ್ರಹದ ಅಡಿಯಲ್ಲಿರುವ ಕ್ರಿ.ಶ. ೧೫೧೮ ರ ಶಾಸನವು ಮೈಲಾರದೇವರ ಜಾತ್ರೆಯ ಉತ್ಸವವನ್ನು ಕುರಿತು ಉಲ್ಲೇಖಿಸುತ್ತದೆ.[೧೩]

೧೪. ಕಲ್ಯಾಣಚಾಲುಕ್ಯ ಅರಸ ಒಂದನೆಯ ಸೋಮೇಶ್ವರ (ಕ್ರಿ.ಶ. ೧೦೫೩), ಸೌಂದತ್ತಿಯ ರಟ್ಟ ಅರಸು ಮೊದಲನೆಯ ಸೇನ (ಕ್ರಿ.ಶ. ೧೦೬೦), ಗೋವೆಯ ಕದಂಬ ಅರಸು ೨ನೇ ಜಯಕೇಶಿ (ಕ್ರಿ.ಶ. ೧೧೧೯) ಮತ್ತು ಗುತ್ತಲದ ೩ನೇ ವಿಕ್ರಮಾದಿತ್ಯ (೧೨೫೦) ಈ ಅರಸರ ಪತ್ನಿಯರ ಹೆಸರುಗಳು ಮೈಳಲದೇವಿ, ಮೈಳಲ ಮಹಾದೇವಿ ಎಂದಿದ್ದು, ಇವು 'ಮೈಲಾರ' ದೇವರ ಹೆಸರನ್ನಾಧರಿಸಿವೆ.

೧೫. ಮಾನಂಗುಡಿಯಲ್ಲಿರುವ ಕ್ರಿ.ಶ. ೧೧೮೮ ರ ಕನ್ನಡ ಶಾಸನದಲ್ಲಿ ಸಿವಣೂರ 'ಮೈಲಾರಭಟ್ಟರಮಕ್ಕಳು ವಾಸುದೇವ' ಎಂದು ಒಬ್ಬಬ್ರಾಹ್ಮಣನ ಹೆಸರು ಬರುತ್ತದೆ.

೧೬. ಬಿಜಾಪುರ ಜಿಲ್ಲೆಯಲ್ಲಿರುವ ಕ್ರಿ.ಶ. ೧೧೫೧ ರ ಕನ್ನಡ ಶಾಸನದಲ್ಲಿ ಕಳಚೂರಿ ಬಿಜ್ಜಳನ ಮಹಾ ಪ್ರಧಾನನ ಹೆಸರು ಮೈಲಾರಯ್ಯ ಎಂದು ದಾಖಲಾಗಿದೆ.

೧೭. ಆಕವೀಡು (ಕರ್ನೂಲ) ಮತ್ತು ಜಿನಗಾನಿ+ಪಲ್ಲಿಯಲ್ಲಿರುವ ತೆಲಗು ಶಾಸನಗಳಲ್ಲಿ ಕ್ರಮವಾಗಿ ಕ್ರಿ.ಶ. ೧೧೫೪ ಮತ್ತು ೧೨೩೨.... ಮೈಲಾರಮುದ್ಧ ಎಂಬ ಪ್ರತಿಗ್ರಾಹಿಗಳ (ತೆರಿಗೆ ಸಂಗ್ರಹ ಮಾಡುವವರ) ಹೆಸರುಗಳಿವೆ.[೧೪]

೧೮. ವೆಂಗಿಯ ಕೋನ ಮಂಡಲದಲ್ಲಿ ಹೈಹಯ ಮನೆತನದ ೧ನೇ ರಾಜೇಂದ್ರ ಚೋಡ ಎಂಬುವನ ಮಗ ಕ್ರಿ.ಶ. ಸುಮಾರು ೧೧೯೫ ರಲ್ಲಿ ಕೋರಮಂಡಲ ಪ್ರದೇಶವನ್ನು ಆಳುತ್ತಿದ್ದ. ಈ ಮಲ್ಲಿದೇವನ ತಾಯಿ ಹಾಗೂ ರಾಜೇಂದ್ರ ಚೋಡನ ಪತ್ನಿಯ ಹೆಸರು ಮೈಲಾರದೇವಿ ಎಂದು ಪೀಠಾಪುರದ ಸ್ತಂಭಶಾಸನದಿಂದ ತಿಳಿದುಬರುತ್ತದೆ.[೧೫]

೧೯. ರಾಮಚಂದ್ರ ಯಾದವನ ಪುರುಷೋತ್ತಮಪುರಿ ಸಂಸ್ಕೃತ ತಾಮ್ರಪಟದಲ್ಲಿ (ಕ್ರಿ.ಶ.೧೩೧೦) ಮೈಲಾರ ಭಟ್ಟನೆಂಬ ಪ್ರತಿಗ್ರಾಹಿಯ ನಿರ್ದೇಶನವಿದೆ.

೨೦. ಕ್ರಿ.ಶ. ೧೩೯೧ ರ ವಿಜಯನಗರ ಸಾಮ್ರಾಟ ಹರಿಹರನ ಚೌಡಾಲಾ ಸಂಸ್ಕೃತ ತಾಮ್ರಪಟದಲ್ಲಿ ಮೈಲಾರ ಭಟ್ಟನ ಉಲ್ಲೇಖವಿದೆ.

೨೧. ಪುಷ್ಪಗಿರಿಯಲ್ಲಿ ವೈದ್ಯನಾಥ ಮಂದಿರದೊಳಗಿರುವ ತ್ರಿಕೂಟೇಶ್ವರ ಗುಡಿಯಲ್ಲಿರುವ ಕ್ರಿ.ಶ. ೧೨೫೪ ರ ಶಾಸನದಲ್ಲಿ ಸೂರ್ಯವಂಶಿ ಪಲ್ಲವ ರಾಜ ಖಂಡೇರಾಯನು ಪಲ್ಲವೇಶ್ವರನನ್ನು ಪ್ರತಿಷ್ಠಾಪಿಸಿದ ಉಲ್ಲೇಖವಿದೆ.

೨೨. ಹಾಸನ ಜಿಲ್ಲೆಯ ಬೇಲೂರಿನ ೩ ಫೆಬ್ರವರಿ ೧೨೭೩ ರ ಶಾಸನದಲ್ಲಿ ನರಸಿಂಹದೇವ ಹೊಯಿಸಳನಲ್ಲಿ ಖಂಡೇಯರಾವ ಎಂಬ ಪ್ರಧಾನನಿದ್ದನು ಎಂಬ ಉಲ್ಲೇಖವಿದೆ.[೧೬]

೨೩. ಚಾಲುಕ್ಯ ಸಾಮ್ರಾಟನಾದ ೬ನೇ ವಿಕ್ರಮದಿತ್ಯನ ಹೊಲಿಯ ಶಾಸನದಲ್ಲಿ ಪಿಟ್ಟ ಎಂಬ ಗಂಗರಾಜನ ಮಗಳ ಹೆಸರು ಮೈಳಲದೇವಿ ಎಂಬ ಉಲ್ಲೇಖವಿದೆ.

೨೪. ಏಳಕೋಟಿ ಅಥವ ಏಳ್ಕೋಟಿ ಎಂಬುದು ಒಂದು ತೀರ್ಥ ಕ್ಷೇತ್ರವಾಗಿತ್ತೆಂಬ ಊಹೆಯನ್ನು ಕ್ರಿ.ಶ. ಇದಕ್ಕೆ ಪೂರಕವಾಗಿ ಕ್ರಿ.ಶ. ೧೧೮೩ ರ ಗುಡ್ಡದಾನವೇರಿ ಶಾಸನದಲ್ಲಿ ಕೋಟಿಪಯಂ ಕವಿಲೆಯ್ನನೆ । ಕ್ಕೋಟಿ ತಪೋದನರ ಮೊದವಿದರಂ ಹನ್ನಿ । ಕ್ಕೋಟಿಯನ್ಕೋಟಿ ತೀರ್ಥ । ಕೋಟ ಮಹಾದಿನ ದೊಳಳಿದೆ ನಿಂತದನಳಿದನು॥ ಇಲ್ಲಿ ಸಹ ಏಳ್ಕೋಟಿ ತೀರ್ಥವೆಂದೇ ಹೇಳಲಾಗಿದೆ.

೨೫. ಮೈಸೂರು ಜಿಲ್ಲೆಯ ಮೈಸೂರು ತಾಲೂಕಿನ ಕುಕ್ಕರಹಳ್ಳಿಯ ಶಾಸನ ಕಾಲ ಕ್ರಿ.ಶ. ಸು. ೯ನೇ ಶತಮಾನವೆಂದು ಹೇಳಲಾಗಿದೆ. ಶಾಸನದಲ್ಲಿ ನರಸಿಂಗಯ್ಯನೆಂಬ ಒಬ್ಬ ಚಾಲುಕ್ಯ ಮಾಂಡಲೀಕನ ಹೆಸರಿದೆ. ಇದರಲ್ಲಿ "ಇ ಧರ್ಮ್ಮಮನಳೆದವರ್ ಲಿಂಗವುಮಂ ಶ್ರೀಪರ್ವತಮುಮಂ ಎಳ್ಕೋಟ್ಟಿಯಮುಂ ಬಾಣರಾಸಿಯುಮನೆಳೆದ ಪಞ್ಚ ಮಹಾಪತಕಂ" ಎಂದುಹೇಳಿದೆ. ಇಲ್ಲಿಯೂ ಕೂಡ ಏಳ್ಕೋಟಿ ಎಂಬುದು ತಪೋದನ ಅಥವಾ ತಪೋಜನ ಎಂದಿರದೆ ಶ್ರೀ ಪರ್ವತ ವಾರಣಾಸಿಗಳಂತೆ ಕ್ಷೇತ್ರವಾಚಕವಾಗಿದೆ. ಕರಮಡಿ ಮತ್ತು ಕುಕ್ಕರಹಳ್ಳಿಯ ಶಾಸನಗಳಿಂದ ಏಳುಕೋಟಿ ಎಂಬುದು ಒಂದು ಕ್ಷೇತ್ರ ವಿಶೇಷವಾಗಿತ್ತೆಂಬುದು ಸ್ಪಷ್ಟ.[೧೭]

ಆನಂತರದಲ್ಲಿ ಬಂದ ಅನೇಕ ಶಾಸನಗಳಲ್ಲಿ ಸಹ ಮೈಲಾರನ ಪ್ರಸ್ತಾಪಗಳಿವೆ. ಮೈಲಾರ ಮಂದಿರಕಟ್ಟಿಸಿದ, ಪೂಜೆಗೆ ದಾನ ಕೊಟ್ಟ, ಮೈಲಾರ ಎಂಬ ಹೆಸರಿಟ್ಟುಕೊಂಡ ಪ್ರತಿಷ್ಠಿತ ವ್ಯಕ್ತಿಗಳ ಉಲ್ಲೇಖಗಳು ಧಾರಾಳವಾಗಿ ಸಿಗುತ್ತವೆ. ಶಾಸನಗಳಲ್ಲಿ ಅಷ್ಟೇ ಅಲ್ಲದೆ ಮೈಲಾರಲಿಂಗ ಅಥವಾ ಮೈಲಾರನ ಕುರಿತಾದ ಇನ್ನೂ ಹಲವಾರು ಉಲ್ಲೇಖಗಳು ಐತಿಹಾಸಿಕ ದಾಖಲೆಗಳ ರೂಪದಲ್ಲಿ ನಮಗೆ ದೊರಕುತ್ತವೆ. ಅವುಗಳಲ್ಲಿ ಪ್ರಮುಖವಾದವುಗಳನ್ನು ಇಲ್ಲಿ ನೋಡಬಹುದು.

## ೪.೨ ಸಾಹಿತ್ಯ

ಕನ್ನಡ ಸಾಹಿತ್ಯದಲ್ಲಿ ಮೈಲಾರನ ಉಲ್ಲೇಖ ಕನ್ನಡ ಕಾವ್ಯಗಳಾದ ನಯಸೇನನ ಧರ್ಮಾಮೃತ (ಕ್ರಿ.ಶ. ೧೧೧೨), ಬ್ರಹ್ಮಶಿವನ 'ಸಮಯ ಪರೀಕ್ಷೆ' (ಕ್ರಿ.ಶ. ೧೧೫೦), ಹರಿಹರನ ಶಂಕರದಾಸಿಮಯ್ಯನ ರಗಳೆ (೧೩ನೇ ಶತಮನ) ಕುಮಾರವ್ಯಾಸನ ಕರ್ನಾಟಕ ಭಾರತ ಕಥಾಮಂಜರಿ (೧೫ನೇ ಶತಮಾನ) ಅಂಜನಾ ಚರಿತೆ, ರಾಮನಾಥ ಚರಿತೆ, ಶಾಂತಲಿಂಗದೇಶಿಕನ ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ, ಆನಂದ ಗಿರಿಕವಿಯ ಶಂಕರ ವಿಜಯ (೧೪ನೇ ಶತಮಾನ) ಮೈಲಾರಲಿಂಗನ ಕುರಿತು ಪ್ರಾಸಂಗಿಕವಾಗಿ ಉಲ್ಲೇಖಗಳು ಬರುತ್ತವೆ.

ನಯಸೇನನ ಧರ್ಮಾಮೃತದ ૩ನೇ ಸಂಧಿ ೨೦೬ನೇ ವಚನದಲ್ಲಿ

> "ಮೈಲಾರನ ಗೊರವನಂತೆ ತಂತಮ್ಮನೆ
> ಬಡಿದುಕೊಳ್ವ ಅಚ್ಚುಳಾಯಿಲರುಮಂ ॥"

ಎಂಬ ಉಲ್ಲೇಖವಿದೆ. ಕ್ರಿ.ಶ. ೧೧೧೨ ರ ಈ ಉಲ್ಲೇಖವೇ ಅತ್ಯಂತ ಪ್ರಾಚೀನವಾದುದೆಂದು ಚಿದಾನಂದಮೂರ್ತಿ ಅವರು ಅಭಿಪ್ರಾಯ ಪಡುತ್ತಾರೆ. ಮೈಲಾರನ ಭಕ್ತರಾದ ಗ್ವಾರಪ್ಪ, ಗ್ವಾರಯ್ಯ, ಇಲ್ಲವೆ ಗೊರವನಂತೆ ಆವೇಶದಿಂದ ತಮ್ಮ ಮೈಯನ್ನೇ ತಾವು ಬಡಿದುಕೊಳ್ಳುವ ಸಂಪ್ರದಾಯ ಮೈಲಾರಲಿಂಗನ ಗೊರವರ ಆಚರಣೆಯಲ್ಲಿದ್ದಿರಬಹುದು.[೧೮]

ಆದಿಶಂಕರಾಚಾರ್ಯರ ಕಾಲದಲ್ಲಿಯೇ (ಕ್ರಿ.ಶ. ೮ನೇ ಶತಮಾನ) ಮೈಲಾರ ಪಂಥವು ಅಸ್ತಿತ್ವದಲ್ಲಿದ್ದಿತು ಎನ್ನಲು ಆಧಾರಗಳಿವೆ. ಕ್ರಿ.ಶ. ೧೪ನೇ ಶತಮಾದಲ್ಲಿದ್ದ ಆನಂದಗಿರಿಯು ತನ್ನ ಶಂಕರ ವಿಜಯದಲ್ಲಿ ಈ ಬಗ್ಗೆ ಹೀಗೆ ಪ್ರಸ್ತಾಪಿಸುತ್ತಾನೆ. ಉಜ್ಜಯನಿಯ ಬಳಿ ಮಲ್ಲ ಎಂಬ ಊರಿನಲ್ಲಿ ಮಲ್ಲಾರಿಯ ಭಕ್ತರು ತಾವು ಮಲ್ಲಾರಿಯ ವಾಹನವಾದ ಶ್ವಾನವೆಂದು ತಿಳಿದುಕೊಂಡು ಅದರಂತೆ ವರ್ತಿಸುತ್ತಿದ್ದರು. ಅದನ್ನು ಕಂಡು ಶಂಕರಾಚಾರ್ಯರು ಅದು ಸರಿಯಲ್ಲವೆಂದು ಅವರಿಗೆ ಉಪದೇಶಿಸಿದರು. ಕನ್ನಡ ಸಾಹಿತ್ಯದಲ್ಲಿ ಮೈಲಾರನ ಉಲ್ಲೇಖ ೧೨ನೇ ಶತಮಾನದಲ್ಲಿ ಸಿಕ್ಕರೂ ಅವನ ಹೆಂಡತಿ ಮಾಳಾಚಿ ಅದಕ್ಕೂ ೨ ಶತಮಾನಗಳಷ್ಟು ಮುಂಚೆಯೇ ಉಕ್ತವಾದುದನ್ನು ಕಾಣುತ್ತೇವೆ ಎಂದರೆ ಮೈಲಾರನ ಪೂಜೆಯು ಅಂದು ಪ್ರಚಾರದಲ್ಲಿದ್ದಿರಬೇಕೆಂದು ಸೂಚಿತವಾಗುತ್ತದೆ.

ಉದಾ:- ಪಂಪನ "ವಿಕ್ರಮಾರ್ಜುನವಿಜಯದಲ್ಲಿ"ಮಾಳಾಚಿಯನ್ನುಹೆಸರಿಸುವಪದ್ಯಹೀಗಿದೆ.

> "ತೊಳಗುವ ಬಾಳ್ ತಳತ್ತಳಿಪ ಕಕ್ಕಡೆ ಬಾಂಭುಕದೊಳ್ ತಗುಳ್ದು ಪ
> ಜ್ಜಳಿಸುವ ಪಂಜರಾಯುಧಮಗಂರ್ವಿ ಸುವಾವ್ರತಿ ಪೂಸಿದಂತರಿ
> ಜ್ಜಳಮಮರ್ದಿರ್ದ ಮಾಳಜಿಗೆ ಪಕ್ಕರೆಯಿಕ್ಕಿದ ಜಾಯಿಲಂ ಭಯಂ
> ಗೊಳಸೆ ಕಡಂಗಿ ತಾಗಿದುದಸೌಂಗೊಳೆ ತುಂಗತರಂಗಸಾಧನಂ ।"

ಮುಂದೆ ಈ ದೇವತೆಯ ಉಲ್ಲೇಖ ಕ್ರಿ.ಶ. ೧೦೬೩ ಮತ್ತು ೧೧೪೯ ರ ದೇವಿ ಹೊಸೂರು ಎಂಬಲ್ಲಿಯ ಶಾಸನಗಳಲ್ಲಿ ಬರುತ್ತದೆ.

ತದನಂತರದ ಕಾವ್ಯಗಳಲ್ಲಿಯೂ ಇವರ ಬಗೆಗೆ ಹೇಳಿಕೆಗಳು ದೊರೆಯುತ್ತವೆ. ಈ ಸಂಬಂಧದಲ್ಲಿ ಕ್ರಿ.ಶ. ೧೩ನೇ ಶತಮಾನದ ಬ್ರಹ್ಮಶಿವನ ಹೇಳಿಕೆಯೊಂದು ವಿಶೇಷವಾಗಿ ಗಮನಿಸುವಂಥದಿದೆ. ಈ ಜೈನ ಕವಿಯು ತನ್ನ 'ಸಮಯಪರೀಕ್ಷೆ' ಯಲ್ಲಿ ಮೈಲಾರ, ಮಾಳಾಚಿಯರನ್ನು ಕುರಿತು ಹೀಗೆ ಹೇಳಿದ್ದಾನೆ.

"ಮನೆವೆರ್ಗ್ಗಡೆ ಚಟ್ಟಪನಿಂ
ದೆ ನಿನ್ನೆ ತಾನಾದ ಮೈಲನುಂ ಮಾಳಾಚಿಯುಂ ॥
ಜನಕಾಪ್ತರಾದರೆನೆ ಮು
ನಿನ್ನ ಹರಿಹರರಾಪ್ತರಾಗದೇಕೆಯೋ ಮಾಣ್ಯರ್ ॥"(ಸಂಧಿ ೮-ಪದ್ಯ೨೩೦)

ಈ ಪದ್ಯದಲ್ಲಿ ಕವಿಯ ಉದ್ದೇಶವೇನೇ ಇದ್ದರೂ ಅವನ ಅಭಿಪ್ರಾಯದಲ್ಲಿ ಈ ದೇವತೆಗಳು ಮನೆವೆರ್ಗ್ಗಡೆ ಚಟ್ಟಪ್ಪ ಎಂಬುವವನಿಂದ 'ನಿನ್ನೆತಾನೆ' ಪ್ರಚಾರಕ್ಕೆಬಂದವರು. ಎಂದರೆ ಅವನದೃಷ್ಟಿಯಲ್ಲಿ ಇವರು ಪ್ರಾಚೀನ ದೇವತೆಗಳಲ್ಲ. ಹೊಸದಾಗಿ ಪ್ರಸಿದ್ಧಿಗೆ ಬಂದವರು. ಮನೆವೆರ್ಗ್ಗಡೆ ಚಟ್ಟಪ್ಪನು ಈ ದೇವತೆಗಳನ್ನು ಪ್ರತಿಷ್ಠಾಪಿಸಿ ಅವರ ಹೆಚ್ಚಿನ ಪ್ರಚಾರಕ್ಕೆ ಕಾರಣ ನಾಗಿರಬೇಕು. ಮನೆವೆರ್ಗ್ಗಡೆ ಎನ್ನುವುದು ಅಧಿಕಾರವಾಚಕಪದ. ಚಟ್ಟಪ್ಪನೆಂಬುವನು ಅಧಿಕಾರಿ ಇವನ ಕಾಲವಾವುದೆಂಬುದು ನಿಶ್ಚಿತವಾಗಿ ತಿಳಿಯುವುದಿಲ್ಲ. ಕ್ರಿ.ಶ. ೧೧೧೬ ರ ಶಾಸನವೊಂದರಲ್ಲಿ ಮನೆವೆರ್ಗ್ಗಡೆ ಚಟ್ಟಪ್ಪನೆಂಬ ಅಧಿಕಾರಿಯ ಉಲ್ಲೇಖವಿದೆ. ಅವನು ಧಾರ್ಮಿಕ ಪ್ರವೃತ್ತಿಯುಳ್ಳವನೆಂದು ಕಂಡುಬರುತ್ತದೆ. ಬ್ರಹ್ಮಶಿವನು ಹೆಸರಿಸಿದ ಚಟ್ಟಪ್ಪಯ್ಯನು ಇವನೇ ಇದ್ದಿರಬಹುದಾಗಿದೆ. ಹೀಗೆ ಕ್ರಿ.ಶ. ೧೧ನೇ ಶತಮಾನಕ್ಕಿಂತ ಪೂರ್ವದಲ್ಲಿ ಮೈಲಾರನ ಪೂಜೆ ಹೆಚ್ಚಾಗಿ ಪ್ರಚಾರಕ್ಕೆ ಬಂದಿತೆಂದು ಹೇಳಬಹುದು. ಅದರೆ ಅದಕ್ಕೂ ಹಿಂದೆಯೇ ಶಂಕರಾಚಾರ್ಯರ ಕಾಲದಿಂದಲೂ ಅದು ಅಸ್ತಿತ್ವದಲ್ಲಿದ್ದಿತೆಂದು ಹೇಳಲಡ್ಡಿಯಿಲ್ಲ.

ಈ ಸಂದರ್ಭದಲ್ಲಿ ಮೈಲಾರದೇವತೆಯ ಸ್ಥಾನಮಾನಗಳ ಬಗೆಗೂ ವಿವೇಚಿಸುವುದು ಅಗತ್ಯ ಏಕೆಂದರೆ ಶಿವನ ಅವತಾರವೆಂದು ಇವನು ಖ್ಯಾತನಾಗಿದ್ದರೂ ಮೂಲತಃ ಇವನೊಬ್ಬ ಕ್ಷುದ್ರದೇವತೆಯೆಂದು ಪರಿಗಣಿಸಲ್ಪಟ್ಟವನು ಮತ್ತು ಅದೇ ಕಾರಣದಿಂದ ಅನೇಕರ ತೆಗಳಿಕೆಗೆ ಕಾರಣನಾದವನು ಇವನು ಶಿವಭಕ್ತರಿಗಿಂತ ಕೆಳಗಿನವನು ಎಂಬ ಅರ್ಥದ ವರ್ಣನೆಗಳು ಹಲವು ದೊರೆಯುತ್ತವೆ. ಇಂಥ ಕೆಲವು ಉಲ್ಲೇಖಗಳನ್ನು ಇಲ್ಲಿ ಪರಿಶಿಲಿಸಬಹುದು.ಈ ಪಂಥದ ಬಗೆಗೆ ಆನಂದಗಿರಿಯ ಶಂಕರವಿಜಯದಲ್ಲಿ ಉಕ್ತವಾದಂತೆ ಶಂಕರಾಚಾರ್ಯರ ಅಭಿಪ್ರಾಯವನ್ನು ಮೇಲೆ ನೋಡಿದ್ದೇವೆ. ಅವರ ಕಾಲದಲ್ಲಿಯೂ ಮೈಲಾರನ ಭಕ್ತರು ಶ್ವಾನದಂತೆ ವರ್ತಿಸುವುದನ್ನು ಕಂಡು ಅದು ಸರಿಯಲ್ಲ ಎಂದು ಬೋಧಿಸಿದರು. ಇಂಥ ವರ್ತನೆಯನ್ನು ಬಸವಣ್ಣನವರು ಕಂಡಿದ್ದರೆಂದು ಅವರ ಒಂದು ವಚನದಿಂದ ತಿಳಿದುಬರುತ್ತದೆ.

"ಮೈಲಾರನಪೂಜಿಸಿನಾಯಗಿ ಬಗಳುವುದ ಕಂಡೆ ಎಂದಿದ್ದಾರೆ."

ಬಸವಣ್ಣನವರು ತಮ್ಮ ವಚನದಲ್ಲಿ ಮೈಲಾರನನ್ನು ವಿಡಂಬಿಸಿರುವುದನ್ನು ನಾವು ಕಾಣಬಹುದು.[೯] ಮಾರಯ್ಯ, ಬೀರಯ್ಯ, ಅಂತರ, ಚಿಂತರ, ಮಲ್ಲಯ್ಯ ಮೊದಲಾದ ಕ್ಷುದ್ರದೇವತೆಗಳನ್ನು ವಿಡಂಬಿಸುತ್ತಾ ಬಲಿ ಕೊಡುವ ಪದ್ದತಿಯನ್ನು ಬಸವಣ್ಣನವರು ವಿರೋಧಿಸಿದ್ದಾರೆ.

"ಒಳ್ಳಿಹಮೈಲಾರನ ಒಳಗೆಲ್ಲಸಣಬು

ಹೊರಗಣ ಬಣ್ಣ ಕರಲೇಸಾಯಿತಯ್ಯ
ಶ್ವಾನನ ನಿದ್ರೆ ಅಜ್ಞಾನಿಯ ತಪದಂತೆ
ಆಯಿತಯ್ಯ ಎನ್ನ ಮತಿ ಕೂಡಲಸಂಗಮದೇವಾ".

ಮತ್ತೊಂದು ವಚನದಲ್ಲಿ

"ಒಳ್ಳಿಹಮೈಲಾರನಸಿಂಗಾರದಂತೆ
ವೇಶ್ಯಯ ಎಂಜಲು ತಿಂಬವಿಟರ
ಸಂಸಾರದಂತೆ ಕೂಡಲ ಸಂಗನ
ಶರಣರನು ಅರಿಯದವರ ಗತಿಯಾಯಿತಯ್ಯ॥".

ಚೆನ್ನಬಸವಣ್ಣನವರ ವಚನಗಳಲ್ಲಿ ಸಹ ಮೈಲಾರನ ಉಲ್ಲೇಖವನ್ನು ನಾವು ಕಾಣಬಹುದಾಗಿದೆ.

"ಭೈರವನನಾರಾಧಿಸಿ ಬಾಹಿರ ವೋದರಯ್ಯ
ಮೈಲಾರನನಾರಾಧಿಸಿ ಕುರುಳು ಬೆರಳ ಕಡಿಸಿಕೊಂಡು
ನಾಯಾಗಿ ಬಗಳುತಿಪ್ಪರಯ್ಯಾ॥"

ಎನ್ನುವಲ್ಲಿ ತಾನು ಒಲಿಸಿಕೊಳ್ಳುವ ದೈವಕ್ಕೆ ಮುಡಿ–ಬೆರಳು ಅರ್ಪಿಸುವಲ್ಲಿ ಮೈಲಾರನಿಗೆ "ಮುಡುಪು" ನೀಡುವ ಪರಂಪರೆಯಿರುವುದನ್ನು ಕಾಣಬಹುದು.[೨೦]

"ಮೈಲಾರನನಾರಾಧಿಸಿ..... ನಾಯಾಗಿ ಬೊಗಳುತಿಪ್ಪರಯ್ಯಾ" ಇದೇಮಾತನ್ನು ಉರಿಲಿಂಗ ಪೆದ್ದಿಯು ತನ್ನ ಒಂದು ವಚನದಲ್ಲಿ ವ್ಯಕ್ತಪಡಿಸಿದ್ದಾನೆ. ಇದರಂತೆ ಮೈಲಾರಿಯು ಕ್ಷುದ್ರದೇವತೆಯೆಂಬ ಉಲ್ಲೇಖಗಳು ಇನ್ನೂ ಹಲವೆಡೆಗಳಲ್ಲಿ ಸಿಗುತ್ತವೆ.[೨೧]

ಕವಿಚಕ್ರವರ್ತಿ ಜನ್ನನ ಅನಂತನಾಥ ಪುರಾಣದಲ್ಲಿ ಸಹ

"ರಕ್ತಾಂಬುಮಜ್ಜನಮಂ ಮಾಡಿಸಿಮಸ್ತಕಾಂಬರುಹದಿಂದಂ
ಪೂಜೆಗೆಯ್ದೊಂತೊಡಾತನ ಕೋರ್ವಾಳಿಕಲಂತು ಮರವಳೇ
ಪಾಮೀರ ಮೈಲಾರನಾ– ಎಂಬ ಉಲ್ಲೇಖವಿದೆ".

ಕುಮಾರವ್ಯಾಸನು ಸಹ ತನ್ನ ಕರ್ನಾಟಕ ಭಾರತ ಕಥಾಮಂಜರಿಯಲ್ಲಿ

"ವೀರರಿಹಿರಹ ಹೊತ್ತುಗಣ ಮೈಲಾರರಾದರು, ಮರಳಿ ತೆಗೆವುತ ಭೈರವನ ಸಾರೂಪ್ಯವಾದರು. ಮಾತು ಮಝುರೆನುತೆ" ಎಂದು ಉಲ್ಲೇಖವಿದೆ. ವಿರಕ್ತ ತೋಂಟದಾರ್ಯ ತೋಂಟದ ಸಿದ್ಧೇಶ್ವರ ಪುರಾಣದಲ್ಲಿ ಕೊರಳಿಗೆ ಕವಡೆಗಳ ಕಟ್ಟಿಸಿ ಶೂನಿಯ ತೆರೆದ ಬಗುಳಿಸುತ್ತವನಿಯೊಳು ಹೊಟ್ಟೆಯ ಹೊರೆದುಕೊಂಡು ತಿರುಗುತಿಹ ಭವಭಾರಿ ದೈವಗಳ ಹೆಚ್ಚುಗೆಯದೆಂತು ಮರುಳೇ ಎಂಬ ಉಲ್ಲೇಖವಿದೆ.

ರಾಮನಾಥ ಚರಿತದಲ್ಲಿ "ಮೈಲಾರನನ್ನು ದೊಡ್ಡಿಹದೇವ ಎಂದು ಕರೆದಿದೆ". ಶಾಂತಲಿಂಗ ದೇಶಿಕನ ಭೈರವೇಶ್ವರ ಕಾವ್ಯದ ಕಾಮ ಮಣಿಸೂತ್ರ ರತ್ನಾಕರದಲ್ಲಿ ಮಾರಿ-ಮಸಣಿ, ಬೀರ, ಮೈಲಾರ, ಉಡಿಸಿಕರಿ, ಬಾದಾಮೈಯ್ಯ ಎಂಬ ದೇವತೆಗಳಹೆಸರಿದೆ.

ಚಕ್ರಧರನ ಕಲಿಧರ್ಮ ನಿರೂಪಣೆಯಲ್ಲಿ ಕಲಿಯುಗದ ಅಂತ್ಯಕ್ಕೆ ಶಿವಾಲಯ ವಿಷ್ಣು ದೇವಾಲಯಗಳು ಕಣ್ಮರೆಯಾಗುವುವು, ಮೈಲಾರ ಕ್ಷೇತ್ರಗಳು ಸ್ಥಾಪನೆಯಾಗುವುವು. ಎಂದು ನಿರೂಪಿಸಲಾಗಿದೆ. ಕನಕದಾಸರ ಕೀರ್ತನೆಗಳಲ್ಲಿ ಎಕ್ಕನಾತಿ, ಕಾಟ, ಜಕ್ಕಿ, ಕನ್ನಯಾರು, ಭೈರವದೇವ, ಮಾರಿ, ಮಸಣಿ, ಚೌಡಿ, ಮೈಲಾರ, ಗುತ್ತಿಯ ಯಲ್ಲಮ್ಮ ಮೊದಲಾದ ದೇವತೆಗಳ ಹೆಸರಿದೆ. ವಿಜಯ ದಾಸರ ಸಾಧನ ಭಾಗ ಸುಳಾದಿಗಳಲ್ಲಿ ಎಲ್ಲಾಯಿ, ಯಕನಾತಿ, ಬನಶಂಕರಿ, ಮಲ್ಲಗ (ಮೈಲಾರ) ಮಾಳಿಗೆ (ಮಾಳಚಿ) ಮೊದಲಾದ ದೈವಗಳ ಹೆಸರುಗಳಿವೆ. ಬ್ರಹ್ಮಾಂಡ ಪುರಾಣದಲ್ಲಿ ಮೈಲಾರಕ್ಕೆ ಸಂಬಂಧಿಸಿದ ಭಾಗವೊಂದಿದೆ. ಅದನ್ನೇ ಆಧರಿಸಿ ಸಂಸ್ಕೃತದಲ್ಲಿ ಮಲ್ಲಾರಿ ಮಹಾತ್ಮೆ; ಜಯಾದ್ರಿ ವಿಜಯ ಹಾಗೂ ಮಾರ್ತಾಂಡ ವಿಜಯ ಎಂಬ ಕೃತಿಗಳು ಬಂದಿವೆ.[೨೨]

ಜೈನಕವಿಯಾಗಿದ್ದ ಬ್ರಹ್ಮಶಿವನ (ಕಾಲ ಸುಮಾರು ಕ್ರಿ.ಶ. ೧೧೫೦-೬೦) ಸಮಯ ಪರೀಕ್ಷೆಯಲ್ಲಿ "ವರನೀನಮೆಮೈಲಾರಂ ಕ್ಷೇತ್ರಂ ಕಟಂ ಮರಿಗೆ । ಮಸಣಿಗೆಯನಿಪ್ಪ ಕೊಳದೆಯ್ಯಂಗಳ್ ಎಂದಿದೆ. ಹಾಗೆಯೇ ಮುಂದುವರೆದು ಎಕ್ಕಲ ದೇವಿಗೆ ಮಾದೂಲಕ್ಕನಿಗೂ ಬನದ ಬಳರಿಗೋ ಮೈಲಾರ ಲಿಂಗಕ್ಕೆಯ್ದು ಜತ್ರೆಮಾಳ್ವ ವೊಕ್ಕಲಿಗಂ ಜೈನನಲ್ಲ ನಾತಂ ಕಾಳಂ ।" ಎಂಬ ಉಲ್ಲೇಖವಿದೆ. ಅದರಲ್ಲಿಯೇ ಮೈಲಾರನಿಗಾಗಿ ಜನರು ವ್ರತಗಳನ್ನು ಆಚರಿಸುತ್ತಿದ್ದರು ಎಂಬ ನಿರ್ದೇಶನವೂ ಇದೆ.

ಪ್ರಸ್ತುತದ ಮಣ್ಣ ಮೈಲಾರದ ಕುರಿತಾದ ಪಸಕಾಲದೊಳೆವೆಯಪ ನಾಗಸದಬ್ಬೆ, ಬಳ್ಳಾರಿ, ಮೈಲಾರಂ ಮಸಣಿ, ಮಾರಬ್ಬೆಯಂದಿತು ಸತ್ತಾರ ಭಕ್ತರೇಕೆಯೋ ಕೊಂಡಾಡರ್- ಎಂಬ ಉಲ್ಲೇಖವನ್ನು ಸಹ ನಾವು ಸಮಯಪರೀಕ್ಷೆಯಲ್ಲಿ ಕಾಣಬಹುದು. ಮೈಲಾರ ಉಗ್ರಪರಂಪರೆಗೆ ಸೇರಿದ ದೈವವೆಂಬುದನ್ನು ಇದು ಸ್ಪಷ್ಟಪಡಿಸುತ್ತದೆ.[೨೩]

ಇನ್ನೂ ಮುಂದುವರಿದ ಬ್ರಹ್ಮಶಿವನು-ಛಲದಿಂದ ಶೌರ್ಯವನ್ನು ತೋರಿ ಕಾದಡಿ ಸತ್ತ ಒಬ್ಬ ಜೈನನೇ ಲೋಕದಲ್ಲಿ ಮೈಲಾರನೆಂದು ರೂಡಿ ಪಡೆದನು ಎಂದು ಹೇಳಿದ್ದಾನೆ. ಇವನ ಹೇಳಿಕೆಯಂತೆ ಕೊಲ್ಲಾಪುರದ ಮಹಾಲಕ್ಷ್ಮಿ, ಲಕ್ಷೇಶ್ವರದ ಸೋಮೇಶ್ವರ ಎಲ್ಲರೂ ಜೈನ ದೇವತೆಗಳೇ. ಇತರೆ ದೇವತೆಗಳು ತಮ್ಮವೆಂದು ಹೇಳಿಕೊಳ್ಳುವುದು ಜೈನಕವಿಗಳ ಸಂಪ್ರದಾಯವೇ ಆಗಿದ್ದಿತು. ಇನ್ನು ಮೈಲಾರನು ಶಿವಭಕ್ತನಿಗಿಂತ ಕೆಳಗಿನವನೆಂಬ ಅಭಿಪ್ರಾಯ ವೀರಶೈವ ಸಾಹಿತ್ಯದಲ್ಲಿ ವ್ಯಕ್ತವಾಗಿದೆ. ಬಸವಣ್ಣನವರು ತಮ್ಮ ಒಂದು ವಚನದಲ್ಲಿ "ಪಿಂಬೇರಮೈಳುಗಮೇಳವಾಡುತ್ತಿದ್ದ" ಎಂದುಹೇಳಿ, ಮೈಲಾರನು ಶಿವನು ಹೇಳಿದಂತೆ ಕುಣಿಯುತ್ತಿದ್ದ ಎಂದು ಸೂಚಿಸಿದ್ದಾರೆ.

ಪರಮಶಿವಭಕ್ತನಾದ ಶಂಕರದಾಸಿಮಯ್ಯನು ಮೈಲಾರನಿಂದ ಕೊಡೆಹಿಡಿಸಿಕೊಂಡ ಕಥೆ ಹರಿಹರನ ಶಂಕರದಾಸಿಮಯ್ಯನ ರಗಳೆಯಲ್ಲಿ ಬರುತ್ತದೆ. ಈ ಕಥೆಯಂತೆ ಶಂಕರದಾಸಿಮಯ್ಯನು ಮೈಲಾರನ ಊರಾದ ಪೆಂಬೇರು ಎಂಬಲ್ಲಿಗೆ ಹೊಗುತ್ತಾನೆ. ಅಲ್ಲಿಯ ದೇವಸ್ಥಾನದಲ್ಲಿ ಕೂಡುವಾಗ ಅವನು ಮೈಲಾರನ ಕಾಲನ್ನು ಎಡವುತ್ತಾನೆ ಆಗ ಮೈಲಾರನು ತಾನು ಧನ್ಯನಾದೆನೆಂದುಕೊಳ್ಳುತ್ತಾನೆ. ಅಲ್ಲಿಗೆ ಮೈಳಲದೇವಿ ಎಂಬುವಳು ಬಂದು ಮೈಲಾರನಿಗೆ ವೀಳೆಯವನ್ನು ಕೊಡಬಯಸಿದಾಗ

ದಾಸಿಮಯ್ಯನು ತಾನೇ ಅದನ್ನು ಸೇವಿಸುತ್ತಾನೆ. ಅದಕ್ಕೆ ಮೈಳಲದೇವಿಯು ಆಕ್ಷೇಪಿಸಲು ದಾಸಿಮಯ್ಯನು ತನ್ನ ಬಾಯ ತಾಂಬೂಲವನ್ನು ಮೈಲಾರನಿಗೆ ಕೊಡುತ್ತಾನೆ. ಆತನು ಅದನ್ನು ಸಂತೋಷದಿಂದ ಸ್ವೀಕರಿಸುತ್ತಾನೆ. ಇದರಿಂದ ಅವನ ಭಕ್ತರು ವ್ಯಾಗ್ರರಾಗುತ್ತಾರೆ.

ಮುಂದೆ ದಾಸಿಮಯ್ಯನು ಅಲ್ಲಿಂದ ಹೊರಟಾಗ ಮೈಲಾರ ಅವನಿಗೆ ಕೊಡೆ ಹಿಡಿದುಕೊಂಡು ಹಿಂಬಾಲಿಸುತ್ತಾನೆ. ಇದನ್ನು ಕಂಡ ಜನ ಬೆಚ್ಚಿ ಮೈಲಾರನನ್ನು ಮರಳಿ ಕಳಿಸಬೇಕೆಂದು ದಾಸಿಮಯ್ಯನನ್ನು ಪ್ರಾರ್ಥಿಸುತ್ತಾರೆ. ಆಗ ಮೈಲಾರನು ತಿರುಗಿ ಬರುತ್ತಾನೆ. ಆದರೆ ಆ ಕೊಡೆ ತನಗಿರಲಿ ಎಂದು ದಾಸಿಮಯ್ಯನನ್ನು ಬೇಡುತ್ತಾನೆ. ದಾಸಿಮಯ್ಯನು ಅದಕ್ಕೊಪ್ಪಿ "ನೀನು ಕೊಡೆಯ ಮೈಲಾರನೆಂದು ಪ್ರಸಿದ್ಧನಾಗು" ಎಂದು ಹರಿಸಿತ್ತಾನೆ.[೨೪] ಶಂಕರದಾಸಿಮಯ್ಯನ ಪುರಾಣದಲ್ಲಿಯೂ ಮೈಲಾರನ ಕಥೆ ವಿಸ್ತಾರವಾಗಿ ಬರುತ್ತದೆ. ಇಲ್ಲಿ ಜಯನಯತಿಯೋರ್ವನು ಅದಃಪತನಹೊಂದಿ ಮೈಲಾರನಿಗೆ ಹುಟ್ಟಿದನೆಂದು ದಾಸಿಮಯ್ಯನು ಮೈಲಾರನ ಭಕ್ತರಾದ ಗೊರವರಿಗೆ ಹೇಳಿ ಅವರೆದುರಿಗೆ ಮೈಲಾರನಿಂದ ಕೊಡೆಹಿಡಿಯುವ ಊಳಗ ಮಾಡಿಸಿಕೊಂಡು ತನ್ನ ಮೇಲ್ಮೈಯನ್ನು ಮೆರೆಸುತ್ತಾನೆ.

೧೧ನೇ ಶತಮಾನದ ಮಹಾನುಭವ ಪಂತದ ಸ್ಥಾಪಕನಾದ ಚಕ್ರಧರನು "ಕಲಿಯುಗದಲ್ಲಿ ಶಿವಾಲಯಗಳೂ ವಿಷ್ಣುಗೃಹಗಳೂ ಕಡಿಮೆಯಾಗಿ ಮೈರಾಳನ ದೇವಾಲಯಗಳು ತಲೆ ಎತ್ತಿದವು" ಎನ್ನತ್ತಾರೆ. ವಿದ್ಯಾರಣ್ಯರು ತಮ್ಮ ಪಂಚದಶಿ ಎಂಬ ಗ್ರಂಥದಲ್ಲಿ "ವಿಘ್ನಭೈರವ ಮೈರಾಳ ಮಾರಿಕಾ ಯಕ್ಷರಾಕ್ಷಸಾ" ಎಂದು ಮೈಲಾರನನ್ನು ಯಕ್ಷ-ಯಕ್ಷಸ ರೋಂದಿಗೆ ಹೆಸರಿಸುತ್ತಾರೆ.ಅದರೂ "ಈಶ್ವರ ಸರ್ವ ಏವೈತಾಃ ಪೂಜಿತಾಃ ಫಲದಾಯಿನಃ" ಎಂದು ಇವನು ಈಶ್ವರ ಸ್ವರೂಪನು ಎಂದು ಹೇಳಿದ್ದಾರೆ.

ಹೀಗೆ ಮೈಲಾರ ಪರಂಪರೆ, ಮೈಲಾರನ ಪೂಜೆ, ಪಂಥ, ಸಾಕಷ್ಟು ಪ್ರಾಚಿನವಾಗಿದ್ದರೂ ಶತಮಾನಗಳವರೆಗೆ ಅವನೊಬ್ಬ ಕ್ಷುದ್ರದೇವತೆಯೆಂದೇ ಪರಿಗಣಿಸಲ್ಪಟ್ಟಂತೆ ತೋರುತ್ತದೆ. ಆದರೆ ಕಲಾಂತರದಲ್ಲಿ ಮೈಲಾರನ ಪ್ರಭಾವ ಹೆಚ್ಚಾಗಿ ಅವನೊಬ್ಬ ಈಶ್ವರನ ಅವತಾರವೆಂದು ಪರಿಗಣಿಸಲಪಟ್ಟಿದ್ದಾನೆ. ಸಂಸ್ಕೃತಮಲ್ಲಾರಿ ಮಹಾತ್ಮೆಯ ಜೊತೆಗೆ, ವಿಶೇಷವಾಗಿ ಮಹಾರಾಷ್ಟ್ರದಲ್ಲಿ ಮೈಲಾರಲಿಂಗನ ಕಾವ್ಯಗಳು ಹುಟ್ಟಿಕೊಂಡವು. ಏಕನಾಥ, ರಾಮದಾಸ ಮೊದಲಾದ ಸಂತರು ಮೈಲಾರನನ್ನು ಈಶ್ವರನ ಅವತಾರವೆಂದು ಬಣ್ಣಿಸಿದ್ದಾರೆ. ಮೂಲತಃ ಸಾಂಸ್ಕೃತಿಕ ಗ್ರಾಮ ದೇವತೆಯೆಂದು ಮೈಲಾರನು ಖ್ಯಾತಿ ಮಹಿಮೆಗಳಿಂದ ಈಶ್ವರನ ಸ್ವರೂಪನೆನಿಸಿಕೊಡಿದ್ದಾನೆ.

ಮೈಲಾರ ಪರಂಪರೆಯ ಪ್ರಾಚೀನತೆಯನ್ನು ಅರಿಯಲು ಲಭ್ಯವಿರುವ ಅನೇಕ ಆಕರಗಳು ಪ್ರಮುಖವಾಗಿದ್ದರೂ ಇವುಗಳ ಪಾತ್ರ ಅತ್ಯಂತ ಕಿರಿದು ಎಂದೇ ಹೇಳಬಹುದಾಗಿದೆ. ಆಕರಗಳ ಮಾಹಿತಿ ಸಂಗ್ರಹಣೆಯ ಪ್ರಕಾರ ಮೂಲತಃ ಮೈಲಾರ ಬಳ್ಳಾರಿ (ಜಿ) ಹಡಗಲಿ (ತಾ) ನ ಮೈಲಾರವೇ ಪ್ರಾಚೀನವಾದದ್ದು ಎಂದು ತಿಳಿಯಬಹುದಾಗಿದೆ. ಈ ಮೈಲಾರವನ್ನು ಹಿರೇ ಮೈಲಾರ, ಕೊಡವಿನ ಮೈಲಾರ, ಮಣ್ಣಮೈಲಾರ ಎಂದು ಅನೇಕ ಹೆಸರುಗಳಿಂದಲೂ ಕರೆಯಲಾಗಿರುವುದುಂಟು.

## ೪.೩ ಸ್ಮಾರಕಗಳು

ಕರ್ನಾಟಕದಲ್ಲಿ ಮೈಲಾರನ ಆರಾಧನೆ ವ್ಯಾಪಕವಾಗಿ ಹರಡಿದೆ. ಹಿರೇ ಮೈಲಾರ, ಮಲ್ಲಯ್ಯನ ಗುಡ್ಡ, ಕಂಪ್ಲಿ, ಹಂಪಿ (ಬಳ್ಳಾರಿ ಜಿಲ್ಲೆ), ದೇವರಹಿಪ್ಪರಗಿ (ಸಿಂಧಗಿ), ಗುಡೂರು (ಹುನಗುಂದ), ಜೀಳಗಿ (ಕುಷ್ಟಗಿ), ಮಂಗಸೂಳಿ, ಸವದತ್ತಿ (ಬೆಳಗಾವಿ), ಕಪ್ಪತಗುಡ್ಡ (ಶಿರಹಟ್ಟಿ), ದೇವರಗುಡ್ಡ (ರಾಣಿಬೆನ್ನೂರು), ಮೈಲಾರಪುರ (ಹೊಸದುರ್ಗ), ಮೈಲಾರ ಪಟ್ಟಣ (ನಾಗಮಂಗಲ), ಮುಡುಕುತೊರೆ (ಟಿ.ನರಸೀಪುರ) ಇನ್ನೂ ಮುಂತಾದ ಸ್ಥಳಗಳು ಈ ದೈವದ ಪ್ರಸಿದ್ಧ ಆರಾಧನಾ ನೆಲೆಗಳಾಗಿವೆ. ಕರ್ನಾಟಕದಲ್ಲಿ ಮೈಲಾರ, ಮಲ್ಲಯ್ಯ, ಸೋಮೇಶ್ವರ, ಸಿದ್ಧೇಶ್ವರ ಮೊದಲಾದ ಹೆಸರುಗಳಿಂದ ಪ್ರಸಿದ್ಧನಾದ ಈ ದೇವತೆಯ ಶಿಲ್ಪ ಲಕ್ಷಣಗಳು ಭೈರವನ ಲಕ್ಷಣಗಳೇ ಆಗಿವೆ. ಈ ಹಿನ್ನೆಲೆಯಲ್ಲಿ ಭೈರವನೇ ವಿವಿಧ ಹೆಸರುಗಳಿಂದ ಅದರಲ್ಲೂ ಮೈಲಾರ, ಮಲ್ಲಯ್ಯ, ಖಂಡೋಬಾ ಹೆಸರುಗಳಿಂದ ಪ್ರಸಿದ್ಧಿ ಹೊಂದಿರುವುದನ್ನು ಕಾಣಬಹುದು. ಕಲೆ ಮತ್ತು ವಾಸ್ತುಶಿಲ್ಪಗಳ ಹಿನ್ನೆಲೆಯಲ್ಲಿ ಮೈಲಾರ ದೇವಾಲಯವು ನೊಳಂಬರ ಕಾಲದಷ್ಟೇ ಪ್ರಾಚೀನ. ಮಲ್ಲಯ್ಯನ ಗುಡ್ಡದ (ಸಿರುಗುಪ್ಪ) ದೇವಾಲಯವು, ಹೆಂಜೇರು ದೇವಾಲಯಗಳು ಪ್ರಾಚೀನವೆಂಬುದು ಅರ್ಥವಾಗುತ್ತದೆ. ಹಾಗೆಯೇ ಕಂಪ್ಲಿಯ ಸೋಮೇಶ್ವರ, ಹಿರೇ ಮೈಲಾರ ಲಿಂಗಪ್ಪ ನಂತರದ ಅವಧಿಯಲ್ಲಿ ವಾಸ್ತುಶಿಲ್ಪ ಕಲೆಗಳ ಹಿನ್ನೆಲೆಯಲ್ಲಿ ವಿಸ್ತಾರಗೊಳ್ಳುತ್ತಾ ಹೋಗಿದೆ. ಕಾರಣವೆಂದರೆ ಹಿರೇ ಮೈಲಾರದ ಮೈಲಾರಲಿಂಗನ ದೇವಾಲಯದ ರಚನೆಗಳು ಕಲ್ಯಾಣ ಚಾಲುಕ್ಯರ ಕಾಲದ ರಚನೆಯನ್ನು ಹೋಲುತ್ತವೆ. ಅಲ್ಲಿನ ಕಂಬಗಳು ದೇವಾಲಯದ ಪ್ರಾಚೀನತೆಯನ್ನು ಕಲ್ಯಾಣ ಚಾಲುಕ್ಯರ ಕಾಲಕ್ಕೆ ಕೊಂಡೊಯ್ಯುತ್ತವೆ.[೨೬] ಕರ್ನಾಟಕದ ಮೈಲಾರ ಪರಂಪರೆಗೆ ಸಂಬಂಧಿಸಿದ ಪ್ರಮುಖ ದೇವಾಲಯಗಳನ್ನು ಕಲೆ ಮತ್ತು ವಾಸ್ತುಶಿಲ್ಪಗಳ ಹಿನ್ನೆಲೆಯಲ್ಲಿ ನೋಡಲಾಗಿದೆ.

### ಹಿರೇಮೈಲಾರ ಕ್ಷೇತ್ರ

ತುಂಗಭದ್ರಾನದಿ ದಕ್ಷಿಣ ದಂಡೆಯ ಮೇಲೆ ಹಿರೇಮೈಲಾರ ಕ್ಷೇತ್ರವಿದೆ. ಇಲ್ಲಿಂದ ಸುಮಾರು ೫ ಕಿ.ಮೀ. ಅಂತರದಲ್ಲಿರುವ ಕಪ್ಪತಗುಡ್ಡದ ಶಾಖೆಗಳಿಂದಾಗಿ ತುಂಗಭದ್ರಾನದಿ ಪಶ್ಚಿಮ ವಾಹಿನಿಯಾಗಿ ತಿರುಗಿ, ಮುಂದುವರೆದು ಪೂರ್ವಾಭಿಮುಖವಾಗಿ ಹರಿಯುತ್ತಿರುವುದರಿಂದ ಮೈಲಾರ ಗ್ರಾಮದ ಮೂರು ದಿಕ್ಕುಗಳಲ್ಲಿ ನದಿ ಪ್ರವಾಹವಿದೆ. ಇದರಿಂದ ಮೈಲಾರ ಕ್ಷೇತ್ರವನ್ನು ಉಂಗುರಾಲ ಕ್ಷೇತ್ರವೆಂದು ಕರೆಯುತ್ತಾರೆ. ಶಾಸನಗಳಲ್ಲಿ ಗುಂಗುರಾಚಂದ, ಹಿರೇ ಮೈಲಾರವೆಂದು ಕರೆಯಲಾಗಿದೆ.

ಗ್ರಾಮದ ಮಧ್ಯ ಎತ್ತರದ ಜಗತಿಯ ಮೇಲೆ ನಿರ್ಮಾಣವಾಗಿರುವುದೇ ಮೈಲಾರಲಿಂಗ ದೇವಾಲಯ. ಈ ದೇವಾಲಯವನ್ನು ಕಾಲಕಾಲಕ್ಕೆ ಜೀರ್ಣೋದ್ಧಾರ ಮಾಡಿರುವುದರಿಂದ ನಿರ್ಮಾಣದ ಕಾಲಾವಧಿ ಸ್ಪಷ್ಟವಾಗುವುದಿಲ್ಲ. ಆದರೆ ಅಲ್ಲಿರುವ ಅವಶೇಷಗಳನ್ನು ಗಮನಿಸಿದಾಗ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಈ ದೇವಾಲಯವನ್ನು ನಿರ್ಮಿಸಿರಬಹುದೆಂದು ಊಹಿಸಬಹುದು. ಈ ದೇವಾಲಯದ ಜೀರ್ಣೋದ್ಧಾರದ ಸಂದರ್ಭದಲ್ಲಿ ಚಾಲುಕ್ಯರಿಂದ ವಿಜಯನಗರ ಮತ್ತು ನಂತರ ಕಾಲಾವಧಿಯ ಅವಶೇಷಗಳನ್ನು ಅಳವಡಿಸಲಾಗಿದೆ.

ದೇವಾಲಯಕ್ಕೆ ವಿಶಾಲವಾದ ಆವರಣವುಂಟು. ಪೂರ್ವ, ದಕ್ಷಿಣದಲ್ಲಿ ಪ್ರವೇಶ ದ್ವಾರಗಳಿವೆ. ಆವರಣದ ಪ್ರವೇಶದ್ವಾರಕ್ಕೆ ಸೋಪಾನಗಳನ್ನು ಅಳವಡಿಸಲಾಗಿದೆ. ಈ ಸೋಪಾನಗಳ ಪ್ರವೇಶದ ಇಕ್ಕೆಲಗಳಲ್ಲಿ ಕೈಗಳಲ್ಲಿ ಗುರಾಣಿ ಮತ್ತು ಬಾಕು ಹಿಡಿದು ತ್ರಿಭಂಗಿಯಲ್ಲಿ ನಿಂತಿರುವ ಎರಡುಶಿಲ್ಪಗಳಿವೆ. ಸೋಪಾನಗಳನ್ನೇರಿ ಮೇಲಕ್ಕೆ ಹೋದರೆ ಪ್ರಕಾರದ ಪ್ರವೇಶ ಮಹಾದ್ವಾರವನ್ನು ನಿರ್ಮಿಸಲಾಗಿದೆ.

ಪ್ರವೇಶದ್ವಾರದ ಎರಡೂ ಬಾಗಿಲುಗಳಲ್ಲಿ ಜಗತಿ, ಅವುಗಳ ಮೇಲೆ ಕಾಲುಗಳನ್ನು ಮೇಲಕ್ಕೆತ್ತಿ ನಿಂತಿರುವ ಸಿಂಹ ಹಾಗೂ ಉಪ ಕಂಬಗಳನ್ನೊಳಗೊಂಡು ತಯಾರಿಸಿದ ಬೃಹತ್ ಕಂಬಗಳಲ್ಲದೆ ಗೋಡೆಯ ಮೇಲೆ ಅಲಂಕೃತ ಅರ್ಧಗಂಬಗಳಿವೆ. ಈ ಲ್ಷಣಗಳಿಂದ ಪ್ರಕಾರದ ಪ್ರವೇಶದ್ವಾರವನ್ನು ವಿಜಯನಗರ ಕಾಲದಲ್ಲಿ ನಿರ್ಮಾಣ ಮಾಡಿರುವುದು ತಿಳಿಯುತ್ತದೆ. ವಿಶಾಲವಾದ ಆವರಣದಲ್ಲಿ ಎತ್ತರದ ಜಗತಿಯ ಮೇಲೆ ಗರ್ಭಗೃಹ, ಅಂತರಾಳ, ಸಭಾಮಂಟಪ ಮತ್ತು ತೆರೆದ ಮುಖಮಂಟಪಗಳಿಂದ ಕೂಡಿದ ಮೈಲಾರಲಿಂಗ ದೇವಾಲಯವನ್ನು ನಿರ್ಮಿಸಲಾಗಿದೆ. ಮುಂಭಾಗದ ತೆರೆದ ಮಂಟಪದಲ್ಲಿ ಚೌಕಾಕಾರದ ನಾಲ್ಕು ಕಂಬಗಳಿವೆ. ಸಭಾಮಂಟಪದಲ್ಲಿ ಕಲ್ಯಾಣಚಾಲುಕ್ಯರ ಕಾಲದ ಎರಡು ವೃತ್ತಾಕಾರದ ಹೊಳಪುಳ್ಳ ಕಂಬಗಳು ಸೂಕ್ಷ್ಮಕೆತ್ತನೆಗಳಿದ ಕೂಡಿವೆ. ಪ್ರವೇಶದ್ವಾರಕ್ಕೆ ಅಲಂಕೃತ ಅರ್ಧಗಂಬ, ಹೂಬಳ್ಳಿ, ಪಟ್ಟಿಕೆ ಹಾಗೂ ಲಲಾಟಬಿಂಬದಲ್ಲಿ ಗಜಲಕ್ಷ್ಮಿ ಶಿಲ್ಪಗಳಿವೆ.

ಈ ಸಭಾಮಂಟಪ ಮತ್ತು ಮುಖಮಂಟಪಗಳನ್ನು ಜೀರ್ಣೋದ್ಧಾರಗೊಳಿಸುವ ಕಾಲಕ್ಕೆ ಕೆಲವು ಮೊದಲಿನ ಅವಶೇಶಗಳನ್ನು ಸೇರಿಸಲಾಗಿದೆ. ಸಭಾಮಂಟಪದ ಬಲಕಂಬದ ಮೇಲೆ ಪ್ರೌಢದೇವರಾಯನ ಕಾಲದ ಶಾಸನವಿದೆ. ಅವನ ದಂಡನಾಯಕ ಸಿಂಗಣನ ಆದೇಶದಂತೆ ನಾಗಪಯ್ಯನ ಮಗ ಹೆಗ್ಗಡೆದೇವರಸನ ಸಹೋದರನಾದ ಗಂಗರಸನು ಶಿಲಾ ರಂಗಮಂಟಪವನ್ನು ಕಟ್ಟಿಸಿದಂತೆ ಹೇಳಲಾಗಿದೆ. ದಕ್ಷಿಣ ಭಾಗದ ಕಂಬದ ಮೇಲಿರುವ ಶಾಸನದಲ್ಲಿ ಮಲ್ಲಾರಿಶಂಕರನೆಂದು ಕರೆಯಲಾಗಿದೆ. ಅದರ ಉತ್ತರ ಮುಖದಲ್ಲಿ ಗಂಗರಸನು ಮೈಲಾರ ದೇವರಿಗೆ ರಂಗಮಂಟಪ, ಚಿತ್ರತೋರಣ, ವಾತಾಯನ, ವಿವಿಧ ದೇವರುಗಳನ್ನು ಪ್ರತಿಷ್ಠಾಪಿಸಿದ ಬಗ್ಗೆ ಉಲ್ಲೇಖವಿದೆ. ಇದರಿಂದ ವಿಜಯನಗರ ಕಾಲದಲ್ಲಿ ಈ ದೇವಾಲಯವನ್ನು ಸಂಪೂರ್ಣವಾಗಿ ಜೀರ್ಣೋದ್ಧಾರ ಗೋಳಿಸಲಾಯಿತೆಂದು ಹೇಳಬಹುದಾಗಿದೆ.

ದೇವಾಲಯದ ಗರ್ಭಗೃಹದಲ್ಲಿ ಗೋಡೆಗೆ ಹೊಂದಿಕೊಂಡಂತೆ ಮಣ್ಣಿನಿಂದ ತಯಾರಿಸಿದ ಮೈಲಾರಲಿಂಗನ ಮೂರ್ತಿಯನ್ನು ಮಾಡಲಾಗಿದೆ. ಈ ಮೂರ್ತಿಯಿಂದಾಗಿ ಮಣ್ಣು ಮೈಲಾರವೆಂದು ಕರೆಯಲಾಗುತ್ತದೆ. ಸುಮಾರು ೪ ಅಡಿ ಎತ್ತರದ ಮೈಲಾರಲಿಂಗನ ಶಿಲ್ಪ ಪದ್ಮಾಸನದಲ್ಲಿದ್ದು, ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ ಮತ್ತು ಪಾನಪಾತ್ರೆಗಳಿವೆ. ತಲೆಯ ಮೇಲೆ ಸುತ್ತಿಕಟ್ಟಿದ ಜಟೆ, ಇಳಿಬಿದ್ದ ಗಡ್ಡ, ಎದ್ದುಕಾಣುವ ಮೀಸೆ ಮತ್ತು ಪಾದಗಳ ಕೆಳಗೆ ಮಲ್ಲಾಸುರ ಹಾಗೂ ಮಣಿಕಾಸುರರ ರುಂಡಗಳಿವೆ. ಇಕ್ಕೆಲಗಳಲ್ಲಿ ಚಾಮರಧಾರಿಯರು, ಸುತ್ತಲೂ ಪ್ರಭಾವಳಿ ಹಾಗೂ ಕೀರ್ತಿಮುಖಗಳಿವೆ. ಗರ್ಭಗೃಹದ ಮಧ್ಯ ಪ್ರಾಚೀನ ಕಾಲದ ಉದ್ಭವಲಿಂಗವಿದೆ. ಗೋಡೆಯ ಗೂಡಿನಲ್ಲಿ ಮೈಲಾರ ಮತ್ತು ಮಾಳಾಚಿಯರನ್ನೊಳಗೊಂಡ ಲೋಹದ ಚಿಕ್ಕ ಉತ್ಸವ ಮೂರ್ತಿಯಿದೆ.

ದೇವಾಲಯದ ಹೊರಗೋಡೆಯನ್ನು ಸಂಪೂರ್ಣವಾಗಿ ಜೀರ್ಣೋದ್ಧಾರಗೊಳಿಸಿದ್ದರಿಂದ ಮೊದಲಿನ ರೂಪ ಕಳೆದುಕೊಂಡಿದೆ. ಗರ್ಭಗೃಹ ಗೋಡೆಗೆ ಅಲ್ಲಲ್ಲಿ ಅರ್ಧಗಂಬ, ಅಧಿಷ್ಠಾನದಲ್ಲಿ ಪಟ್ಟಿಕೆಗಳಿವೆ. ಉಳಿದ ಗೋಡೆ ಸರಳ ಶೈಲಿಯಲ್ಲಿದ್ದು, ಗರ್ಭಗೃಹದ ಮೇಲೆ ತ್ರಿತಲ ಶಿಖರವಿದೆ. ಅದರಲ್ಲಿ ಅರ್ಧಗಂಬ, ಗೂಡು ಮತ್ತು ಉಬ್ಬು ಶಿಲ್ಪಗಳಿವೆ. ಶಿಖರದ ಮೇಲ್ಭಾಗದ ಮೂಲೆಗಳಲ್ಲಿ ನಂದಿಶಿಲ್ಪ ಹಗೂ ಮೇಲ್ಭಾಗ ಅಮಲಕವಿದೆ. ಶಿಖರಕ್ಕೆ ಹೊಂದಿಕೊಂಡು ಮುಂಭಾಗದಲ್ಲಿ ಸುಖನಾಸವನ್ನು ನಿರ್ಮಿಸಲಾಗಿದೆ.

ಲಗ್ನದ ಮನೆಗೆ ಹೊಂದಿಕೊಂಡಂತೆ ಗಂಗಿಮಾಳಮ್ಮನ ದೇವಾಲಯವಿದೆ. ಸಭಾಮಂಟಪ ಮತ್ತು ಗರ್ಭಗೃಹದಿಂದ ಕೂಡಿರುವ ಇದು ವಿಜಯನಗರ ಕಾಲದಲ್ಲಿ ನಿರ್ಮಾಣವಾಗಿದೆ. ಗರ್ಭಗೃಹದಲ್ಲಿ ಆನಂದಾಸನದಲ್ಲಿರುವ ಗಂಗಿಮಾಳಮ್ಮನ ಕೈಗಳಲ್ಲಿ ತ್ರಿಶೂಲ, ಡಮರು, ಪಾನಪಾತ್ರೆ ಮತ್ತು ಸ್ಥಾಪಿತ ಲಿಂಗವನ್ನು ಹಿಡಿದಿದ್ದಾಳೆ ಈ ಗುಡಿಯ ಸಭಾಮಂಟಪದಲ್ಲಿ ಚಾಲುಕ್ಯ ಶೈಲಿಯ ನಾಲ್ಕು ಕಂಬಗಳಿವೆ. ಸಭಾಮಂಟಪದ ಪಕ್ಕದಲ್ಲಿ ಲಗ್ನದ ಮನೆಯಿದೆ. ಈ ದೇವಾಲಯದ ಕಂಬಗಳು ಮತ್ತು ಹೊರಭಾಗದ ಅದಿಷ್ಠಾನದಿಂದ ಮೂಲನಿರ್ಮಾಣದ ಲಕ್ಷಣಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ಸರಳ ಶೈಲಿಯ ಹೊರಭಾಗದ ಗೋಡೆ, ಮೇಲ್ಭಾಗ ಪಂಚತಲ ಶಿಖರವಿದೆ. ಪ್ರತಿತಲವನ್ನು ಪ್ರತ್ಯೇಕಿಸಲು ಅಡ್ಡ ಪಟ್ಟಿಕೆಗಳೂ, ತಳಗಳಲ್ಲಿ ವಿವಿಧ ಶಿಲ್ಪಗಳನ್ನು ಅಳವಡಿಸಲಾಗಿದೆ.

ಕಾಂಚವೀರರ ಸ್ಥಾನದಲ್ಲಿ ಗರುಡ ಪೀಠದ ಮೇಲೆ ರುಂಡವನ್ನಿಡಲಾಗಿದೆ. ಪೀಠದ ಹಿಂಬಾಗದಲ್ಲಿ ಎರಡೂ ಕೈಗಳಲ್ಲಿ ಖಡ್ಗಗಳನ್ನು ಹಿಡಿದಿರುವ ವೀರ ಪಕ್ಕದಲ್ಲಿ ಅನೇಕ ರುಂಡಗಳಿವೆ. ಇದರಿಂದ ಕುದುರೆ ಹಾಗೂ ನಾಯಿಯ ಸಂಪ್ರದಾಯಗಳಲ್ಲದೆ ನರಬಲಿದಾನವೂ ಕೂಡ ನಡೆಯುತ್ತಿತ್ತೆಂದು ಹೇಳಬಹುದು. ತೆಕ್ಕಲಕೋಟೆಯ ಮೈಲಾರಲಿಂಗನ ದೇವಾಲಯದಲ್ಲಿ ನರಬಲಿದಾನಕ್ಕೆ ಸಂಬಂಧಿಸಿದ ಅನೇಕ ಅವಶೇಷಗಳಿವೆ. ಜಾತ್ರೆಯ ಸಂದರ್ಭದಲ್ಲಿ ಖಡ್ಗ ಮತ್ತು ಕಾಲುಪವಾಡದ ಸಲಕರಣೆಗಳನ್ನು ಕಾಂಚವೀರರ ಸ್ಥಾನದಲ್ಲಿಟ್ಟು ಪೂಜಿಸಲಾಗುತ್ತದೆ.

ದೇವಾಲಯದ ಸುತ್ತಲೂ ವಿಶಾಲವಾದ ಆವರಣವಿದ್ದು, ಅದರಲ್ಲಿ ನಾರಾಯಣನ ಗುಡಿ, ಕಾಂಚವೀರರ ಸ್ಥಾನ, ಕಪಿಲಮುನಿ ಸಿಂಹಾಸನ, ಬಸವಣ್ಣ, ಕಾಳಿ, ವೀರಭದ್ರ ಮತ್ತು ಹಳೆ ಜುಂಜಪ್ಪನ ಗುಡಿಗಳಿವೆ.[೨೭]

**ಮೂರ್ತಿಶಿಲ್ಪ**

ಮೈಲಾರಲಿಂಗ ದೇವಾಲಯದ ಗರ್ಭಗೃಹದಲ್ಲಿ ನಟ್ಟನಡುವೆ ಸ್ವಯಂಭೂಲಿಂಗವಿದೆ. ಇದರ ಹಿಂದುಗಡೆ ಗೋಡೆಯಲ್ಲಿ ಸು. ೮.೧೦ ಅಡಿ ಎತ್ತರವಾದ ಕಮಾನು ಕೊರೆಯಲಾಗಿದ್ದು ಈ ಕಮಾನಿನಲ್ಲಿ ಮೈಲಾರಲಿಂಗ ಸ್ವಾಮಿಯ ಮೃಣ್ಮಯ ಮೂರ್ತಿ ಇದೆ. ಮೈಲಾರಲಿಂಗ ಸ್ವಾಮಿಯು ಸುಖಾಸೀನನಾಗಿದ್ದು ಆನಂದಾಸನದಲ್ಲಿದ್ದಾನೆ. ಮೂರ್ತಿಯು ೬ ಅಡಿ ಅಗಲ ೬ ಅಡಿ ಎತ್ತರ ವಾಗಿರುತ್ತದೆ. ೪ ಹಸ್ತಗಳಲ್ಲಿ ಕ್ರಮವಾಗಿ ಖಡ್ಗ, ತ್ರಿಶೂಲ, ಡಮರು ಮತ್ತು ಬಟ್ಟಲುಗಳಿವೆ. ಖಡ್ಗವೊಂದನ್ನು ಬಿಟ್ಟು ಇತರ ವಸ್ತುಗಳು ಮೃಣಯವಾಗಿವೆ. ಮೂರ್ತಿಯ ತಲೆಯಮೇಲೆ ಸುತ್ತಿಕಟ್ಟಿದ ಜಡೆಯೂ ಇಳಿಬಿದ್ದ ಗಡ್ಡ ಮತ್ತು ಮೀಸೆಗಳು ಮುಖಕ್ಕೆ ಒಪ್ಪುತ್ತವೆ. ಬದಿಯಲ್ಲಿ ಚಾಮರಧಾರಿಗಳನ್ನು

ಮತ್ತು ಪಾದದಡಿಯಲ್ಲಿ ಎರಡೂ ಬದಿಗೆ ಎರಡು ರುಂಡಗಳನ್ನು ಬಿಡಿಸಲಾಗಿದೆ. ಇವೆಲ್ಲವೂ ಸೇರಿ ಒಟ್ಟು ಮೂರ್ತಿಯು ರೌದ್ರ-ಶಾಂತಗಳ ವಿಶೀಷ್ಟಭಾವವನ್ನು ಏಕಕಾಲದಲ್ಲಿ ಉಂಟುಮಾಡಬಲ್ಲ ಕಲಾಕೃತಿಯಾಗಿದೆ.

**ಗಂಗಿಮಾಳಮ್ಮನ ವಿಗ್ರಹ:-**

ಮೈಲಾರಲಿಂಗ ದೇವಾಲಯದ ಉತ್ತರಕ್ಕಿರುವ ದೇವಲುದಲ್ಲಿ ಗಂಗಿಮಾಳಮ್ಮನ ಶಿಲಾ ವಿಗ್ರಹವಿದೆ. ಇದರ ಕೈಯಲ್ಲಿಯೂ ಕ್ರಮವಾಗಿ ಖಡ್ಗ, ತ್ರಿಶೂಲ, ಡಮರು ಮತ್ತು ಪನಪಾತ್ರೆಗಳಿವೆ. ಈ ಮೂರ್ತಿಯೂ ಮುಂಬದಿಯಲ್ಲಿಯೂ ಸ್ಥಾಪಿತ ಲಿಂಗವೊಂದಿದೆ. ಮೂರ್ತಿಯನ್ನು ಬೆಳ್ಳಿಯ ಮುಖವಾಡದಿಂದ ಯಾವತ್ತೂ ಅಲಂಕರಿಸಿರುತ್ತಾರೆ. ಅದರ ಮುಂದೆ ಅವಳ ಚತುರ್ಭಜಗಳ ಸಂಕೇತವಾಗಿ ಕಟ್ಟಿಗೆಯ ೪ ಕೈಗಳು ಇಡಲ್ಪಟ್ಟಿವೆ. ಇವುಗಳಿಗೆ ಯಾವತ್ತೂ ಹಸಿರು ಬಳೆ ಇಡಿಸಿರುತ್ತಾರೆ. ಬದಿಯಲ್ಲಿ ಪಂಚಲೋಹದ ಇನ್ನೊಂದು ಉತ್ಸವ ಮೂರ್ತಿಶಿಲ್ಪವಿದೆ.

**ಭಿನ್ನ ಮೂರ್ತಿಗಳು:-**

ಮೈಲಾರಲಿಂಗ ಗಂಗಿಮಾಳಮ್ಮ ದೇವಾಲಯಗಳ ಪರಿಸರಗಳಲ್ಲಿ ಹಳೆಯ ಅನೇಕ ಮೂರ್ತಿಗಳಿವೆ. ವಿಶೇಷವಾಗಿ ಮೈಲಾರಲಿಂಗ ದೇವಲಯದ ದಕ್ಷಿಣ ಗೋಡೆಗೆ ಆನಿಸಿ ಇಟ್ಟ ಮೂರ್ತಿಗಳು ಗಮನಾರ್ಹವಾಗಿವೆ. ಅಶ್ವಾರೋಹಿಯಾದ ಮೈಲಾರಲಿಂಗಪ್ಪ, ಹೆಗ್ಗಪ್ಪ (ವಿಷ್ಣು) ಗಣಪತಿ ಮುಂತಾದ ದೇವತಾ ವಿಗ್ರಹಗಳನ್ನು ಅಲ್ಲಿ ಕಾಣಬಹುದು. ಅಡಿಯಲ್ಲಿ ಮಲ್ಲಾಸುರ ಮಣಿಕಾಸುರರ ಶಿರಗಳನ್ನು ಬಿಡಿಸಿರುವ ಎರಡು ವಿಗ್ರಹಗಳೂ ಇವೆ. ಇವೂ ಕೂಡ ಮೈಲಾರದ ಸುತ್ತ ಮೊದಲಿದ್ದ ಹಳ್ಳಿಗಳಿಂದ ತಂದ ಮೂರ್ತಿಗಳು ಒಮ್ಮೆ ಪೂಜೆಗೊಳ್ಳುತ್ತಿದ್ದ ಮೂರ್ತಿಗಳನ್ನು ಕೈಕಾಲುಗಳಲ್ಲಿ ಚೆಲ್ಲಬಾರದೆಂಬ ನಂಬಿಕೆಯಿಂದ ಹೀಗೆ ಜೋಡಿಸಿ ಇಡಲಾಗಿದೆ.[೨೮]

**ಲೋಹದ ಮೂರ್ತಿಶಿಲ್ಪಗಳು:-**

ಮೈಲಾರ ಮತ್ತು ಗಂಗಿಮಾಳಮ್ಮನಿಗೆ ಸಂಬಂಧಿಸಿದಂತೆ ವಿಜಯನಗರ ಕಾಲದಿಂದಲೂ ಅನೇಕ ಲೋಹದ ಮೂರ್ತಿಗಳನ್ನು ಕಾಣಬಹುದು. ಈ ಮೂರ್ತಿಶಿಲ್ಪಗಳನ್ನು ಉತ್ಸವದ ಸಂದರ್ಭಗಳಲ್ಲಿ ಬಳಸಲಾಗುತ್ತದೆ.

೧. ಅಶ್ವಾರೋಹಿಯಾದ ಮೈಲಾರಲಿಂಗಪ್ಪ ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ ಮತ್ತು ಇನ್ನೊಂದು ಕೈಯಲ್ಲಿ ಕುದುರೆ ಲಗಾಮು ಹಿಡಿದಿದ್ದಾನೆ. ಪಕ್ಕದಲ್ಲಿರುವ ಗಂಗಿಮಾಳಮ್ಮನ ಶಿಲ್ಪ ತ್ರಿಭಂಗಿಯಲ್ಲಿ ಫೀಠದ ಮೇಲಿದೆ. ಅವುಗಳ ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ ಮತ್ತು ಪಾನಪಾತ್ರೆಗಳಿವೆ. ಕಿರೀಟಮುಕುಟ, ಕಿವಿಯೊಲೆ, ಕೊರಳಹಾರ, ನಡುಪಟ್ಟಿ ಮುಂತಾದ ಆಭರಣಗಳನ್ನು ಧರಿಸಿದ್ದಾಳೆ ಇನ್ನೊಂದು ಶಿಲ್ಪ ಹೆಗ್ಗಪ್ಪನದು. ಸಮಭಂಗಿಯಲ್ಲಿ ಪೀಠದ ಮೇಲೆ ನಿಂತಿರುವ ಇವನು ಕೈಗಳಲ್ಲಿ ಪದ್ಮ, ಲೇಖನಿ ಮತ್ತು ಪುಸ್ತಕಗಳನ್ನು ಹಿಡಿದಿದ್ದಾನೆ.

೨ ಮೈಲಾರಲಿಂಗಪ್ಪ ರುಂಡಗಳಿರುವ ಪೀಠದ ಮೇಲೆ ಸಮಭಂಗಿಯಲ್ಲಿ ನಿಂತಿದ್ದಾನೆ. ಕಿರೀಟಮುಕುಟ ಧರಿಸಿ ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ ಮತ್ತು ಪಾನಪಾತ್ರೆಗಳನ್ನು ಹಿಡಿದಿದ್ದಾನೆ. ಪಕ್ಕದಲ್ಲಿ ಸ್ವಲ್ಪ ಕಡಿಮೆ ಎತ್ತರದಲ್ಲಿರುವ ಶಿಲ್ಪವನ್ನು ಹೆಗ್ಗಪ್ಪನೆಂದು ಕರೆಯುತ್ತಾರೆ. ಪೀಠದ ಮೇಲೆ ಸಮಭಂಗಿಯಲ್ಲಿ ನಿಂತಿರುವ ಇವನು ಕರಂಡಮುಕುಟ, ದೋತಿ ಮತ್ತು ಆಭರಣಗಳನ್ನು ಧರಿಸಿ ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ ಮತ್ತು ಪಾನಪಾತ್ರೆಗಳನ್ನು ಹಿಡಿದಿದ್ದಾನೆ. ಪೀಠದ ನಾಲ್ಕು ಮೂಲೆಗಳಲ್ಲಿ ರುಂಡಗಳು ಹಾಗೂ ಅವುಗಳ ಮಧ್ಯ ನಾಗ ಹಾಗೂ ಕೆಳಭಾಗದಲ್ಲಿ ಕೀರ್ತಿಮುಖಗಳಿವೆ. ಕಮಲ ಪೀಠದ ಮೇಲೆ ಸುಖಾಸನದಲ್ಲಿ ಕುಳಿತುಕೊಂಡಿರುವ ಗಂಗಿಮಾಳಮ್ಮ, ಕಿರೀಟಮುಕುಟ ಧರಿಸಿ, ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ ಮತ್ತು ಪಾನಪಾತ್ರೆಗಳನ್ನು ಹಿಡಿದಿದ್ದಾಳೆ. ಕಿರೀಟದ ಮೇಲ್ಭಾಗದಲ್ಲಿ ಹೆಡೆಬಿಚ್ಚಿದ ನಾಗವಿದೆ.

೩ ಸುಖನಾಸಿಯಲ್ಲಿ ಇರುವ ಮೈಲಾರಲಿಂಗಪ್ಪನ ತೊಡೆಯ ಮೇಲೆ ಗಂಗಿಮಾಳಮ್ಮ ಕುಳಿತುಕೊಂಡಿದ್ದಾಳೆ. ಕಿರೀಟಮುಕುಟ ಧರಿಸಿ, ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ ಮತ್ತು ಪಾನಪಾತ್ರೆಗಳಿವೆ. ಹಿಂಭಾಗದಲ್ಲಿ ಒಂಬತ್ತು ಮಣ ತೂಕದ ಬೆಳ್ಳಿಯ ಫಲಕವಿದೆ. ಅದರಲ್ಲಿ ಚಾಮರಧಾರೆಯರು, ಕೀರ್ತಿಮುಖ, ಮಕರತೋರಣ ಮುಂತಾದ ಅಲಂಕರಣೆಗಳನ್ನು ಬಿಡಿಸಲಾಗಿದೆ. ಪೀಠದಲ್ಲಿ ಕ್ರಿ.ಶ. ೧೫೧೮ ರ ಶಾಸನವು ಹಿರೇಮೈಲಾರ ದೇವರೆಂದು ಉಲ್ಲೇಖಿಸುತ್ತದೆ. ಇದನ್ನು ಅಗಿ ಹುಣ್ಣಿಮೆಯಂದು ಲಗ್ನದ ಸಂದರ್ಭದಲ್ಲಿ ಉತ್ಸವ ಮೂರ್ತಿಯನ್ನಾಗಿ ಬಳಸಲಾಗುತ್ತದೆ.[೨೯] ಈ ಲೋಹದ ಮೂರ್ತಿಗಳನ್ನು ಕುದುರೆ ಹಬ್ಬದಲ್ಲಿ, ಕಾರ್ಣಿಕೋತ್ಸವದ ಸಮಯದಲ್ಲಿ ಪಾರಂಪರಿಕವಾಗಿ ಉಪಯೋಗಿಸುತ್ತಾರೆ.

ಕರ್ನಾಟಕದಲ್ಲಿ ಮೈಲಾರ ಕ್ಷೇತ್ರವನ್ನು ಮೈಲಾರಲಿಂಗನ ಮೂಲ ಸ್ಥಳವೆಂದು ಕರೆಯಲಾಗಿದೆ. ಈ ಮೈಲಾರ ದೇವರು ಜನಪದರ ದೇವತೆಯೆಂದು ಗುರುತಿಸಿಕೊಂಡಿದ್ದು ಕರ್ನಾಟಕ, ಮಹಾರಾಷ್ಟ್ರ, ತಮಿಳುನಾಡು ಮತ್ತು ಆಂಧ್ರ ಪ್ರದೇಶಗಳಲ್ಲಿ ಅಸಂಖ್ಯಾತ ಭಕ್ತ ಸಮೂಹವನ್ನು ಹೊಂದಿದೆ. ಈ ಭಕ್ತ ಸಮೂಹವು ಕಾವ್ಯ ಮತ್ತು ಪುರಾಣಗಳ ಮೂಲಕ ನಂಬಿಕೆ ಸಂಪ್ರದಾಯಗಳನ್ನು ಹಿಡಿದಿಟ್ಟುಕೊಂಡಿದೆ. ಇತರೆ ಮೈಲಾರನ ಕ್ಷೇತ್ರಗಳಲ್ಲಿನ ಆಚರಣೆಗಳಲ್ಲಿ ಮತ್ತು ವಾಸ್ತುರಚನೆಯಲ್ಲಿ ಸ್ವಲ್ಪ ವ್ಯತ್ಯಾಸಗಳು ಕಂಡುಬಂದರು ಪೌರಾಣಿಕ ಹಿನ್ನಲೆ ಒಂದೇ ಆಗಿದೆ.

## ಅಡಿಟಿಪ್ಪಣಿ

೧ ಶ್ರೀನಿವಾಸ ರಿತ್ತಿ, ೧೯೭೦, **ಮೈಲಾರ ದೇವರು**, ಪು.ಸಂ. ೪-೫

೨ ಅದೇ, ಪು.ಸಂ. ೫-೬

೩ ಢೇರೆ.ರಾ.ಚಿಂ. ಮತ್ತು ಡಾ. ರಾಮಕೃಷ್ಣ ಮರಾಠೆ, ೨೦೦೩, **ದಕ್ಷಿಣದ ದೇಶೀಯ ದೇವರು ಶ್ರೀ ಖಂಡೋಬಾ**, ಪು.ಸಂ. ೪

೪ ಶ್ರೀನಿವಾಸ ರಿತ್ತಿ, ಪೂರ್ವೋಕ್ತ, ಪು.ಸಂ. ೭-೮

೫ ನಾಗರಾಜ ಹೊಸೂರಕರ್, ೨೦೦೮, **ಮೈಲಾರಲಿಂಗನ ಆಚರಣೆ: ಒಂದು ಸಾಂಸ್ಕೃತಿಕ ಅಧ್ಯಯನ**, ಪು.ಸಂ. ೩೩-೩೪

೬ ಎಫ್.ಟಿ. ಹಳ್ಳಿಕೇರಿ, ೨೦೧೮, **ಮೈಲಾರಲಿಂಗ ಪರಂಪರೆ**, ಪು.ಸಂ.೩೩-೩೪

೭ ಢೇರೆ.ರಾ.ಚಿಂ. ಮತ್ತು ಡಾ. ರಾಮಕೃಷ್ಣ ಮರಾಠೆ, ಪೂರ್ವೋಕ್ತ, ಪು.ಸಂ. ೯

೮ ಎಫ್.ಟಿ. ಹಳ್ಳಿಕೇರಿ, ಪೂರ್ವೋಕ್ತ, ಪು.ಸಂ. ೩೩

೯ ಢೇರೆ.ರಾ.ಚಿಂ. ಮತ್ತು ಡಾ. ರಾಮಕೃಷ್ಣ ಮರಾಠೆ, ಪೂರ್ವೋಕ್ತ, ಪು.ಸಂ. ೯

೧೦ ನೇಗಿನಹಾಳ ಎಂ.ಬಿ., ೧೯೯೯, **ನೇಗಿನಹಾಳ ಪ್ರಬಂಧಗಳು, ಪು.ಸಂ. ೧೨೬**

೧೧ ನಾಗರಾಜ ಹೊಸೂರಕರ್, ಪೂರ್ವೋಕ್ತ, ಪು.ಸಂ. ೩೬

೧೨ ಢೇರೆ.ರಾ.ಚಿಂ. ಮತ್ತು ಡಾ. ರಾಮಕೃಷ್ಣ ಮರಾಠೆ, ಪೂರ್ವೋಕ್ತ, ಪು.ಸಂ. ೧೦

೧೩ ದೇವರಕೊಂಡಾರೆಡ್ಡಿ, ೧೯೯೮, **ಕನ್ನಡ ವಿಶ್ವವಿದ್ಯಾಲಯ ಶಸನ ಸಂ-೧ ಬಳ್ಳಾರಿ ಜಿಲ್ಲೆ**, ಪು.ಸಂ ೩೩೩-೩೩೭

೧೪ ಢೇರೆ.ರಾ.ಚಿಂ. ಮತ್ತು ಡಾ. ರಾಮಕೃಷ್ಣ ಮರಾಠೆ, ಪೂರ್ವೋಕ್ತ, ಪು.ಸಂ. ೯-೧೦

೧೫ ನಾಗರಾಜ ಹೊಸೂರಕರ್, ಪೂರ್ವೋಕ್ತ, ಪು.ಸಂ. ೩೬

೧೬ ಢೇರೆ.ರಾ.ಚಿಂ. ಮತ್ತು ಡಾ. ರಾಮಕೃಷ್ಣ ಮರಾಠೆ, ಪೂರ್ವೋಕ್ತ, ಪು.ಸಂ. ೧೦

೧೭ ನೇಗಿನಹಾಳ ಎಂ.ಬಿ., ೧೯೯೯, **ನೇಗಿನಹಾಳ ಪ್ರಬಂಧಗಳು**, ಪು.ಸಂ ೧೨೦-೧೨೨

೧೮ ಎಫ್.ಟಿ. ಹಳ್ಳಿಕೇರಿ, ಪೂರ್ವೋಕ್ತ, ಪು.ಸಂ. ೨೧- ೩೩

೧೯ ಶ್ರೀನಿವಾಸ ರಿತ್ತಿ, ಪೂರ್ವೋಕ್ತ, ಪು.ಸಂ. ೧೮-೨೨

೨೦ ನಾಗರಾಜ ಹೊಸೂರಕರ್, ಪೂರ್ವೋಕ್ತ, ಪು.ಸಂ. ೪೦-೪೧

೨೧ ಎಫ್.ಟಿ. ಹಳ್ಳಿಕೇರಿ, ೨೦೧೮, **ಮೈಲಾರಲಿಂಗ ಪರಂಪರೆ**, ಪು.ಸಂ. ೨೮

೨೨ ನಾಗರಾಜ ಹೊಸೂರಕರ್, ಪೂರ್ವೋಕ್ತ, ಪು.ಸಂ. ೪೧-೪೩

೨೩ ಅದೇ, ಪು.ಸಂ. ೪೦ .

೨೪ ಶ್ರೀನಿವಾಸ ರಿತ್ತಿ, ಪೂರ್ವೋಕ್ತ, ಪು.ಸಂ. ೨೩

೨೫ ಅದೇ, ಪು.ಸಂ. ೪೯

೨೬ ಮಹದೇವ ಸಿ., ೨೦೧೨, **ಮೈಲಾರ**, ಪು.ಸಂ. ೭೮-೮೦

೨೭ ನೇಗಿನಾಹಳ ಎಂ.ಬಿ., ೧೯೯೨, **ಮೈಲಾರಲಿಂಗ-ಖಡೋಬ**, ಪು.ಸ>೧೩-೧೫

೨೮ ಮಹದೇವ ಸಿ., ಪೂರ್ವೋಕ್ತ ಪು.ಸಂ. ೮೩-೮೪

# ಅಧ್ಯಾಯ-೫

# ನಂಬಿಕೆ ಮತ್ತು ಆಚರಣೆ

ವ್ಯಕ್ತಿಯು ಸಾಮಾಜಿಕ, ಧಾರ್ಮಿಕ ಜೀವನದಲ್ಲಿ ಅನುಸರಿಸಬೇಕಾದ ನಿಯಮ, ಕಟ್ಟುಪಾಡು, ಸಂಪ್ರದಾಯಗಳನ್ನು ಆಚಾರಣೆ ಎನ್ನುತ್ತಾರೆ. ಒಂದು ಜನಾಂಗ ಅಥವಾ ಪಂಗಡದಲ್ಲಿ ಸಾಂಪ್ರದಾಯಿಕವಾಗಿ ಬೆಳೆದು ಬಂದಿರುವ ಆಚಾರ ವಿಚಾರಣೆಗಳನ್ನು ವೈಯಕ್ತಿಕ ಎನ್ನುವುದಕ್ಕಿಂತ ಸಾಮಾಜಿಕ ಅನುಷ್ಠಾನಗಳು ಧರ್ಮದ ಪ್ರಧಾನ ಅಂಶಗಳು ಎನ್ನಬಹುದು. ಪ್ರತಿಯೊಂದು ಧರ್ಮವೂ ಅಮಾನುಷ ಶಕ್ತಿಯನ್ನು ತಾಳಿದ ಮಾನಸಿಕ ಧೋರಣೆಗಳು, ಅವಿರ್ಭಾವವಾಗುವುದು ನಂಬಿಕೆಗಳು ಹಾಗೂ ಆಚರಣೆಗಳ ಮೇಲೆಯೇ ಎಂದು ಹೇಳಬಹುದು. ನಂಬಿಕೆಗಳು ಭಾವನೆ ಹಾಗೂ ಆಲೋಚನೆಗಳ ರೂಪದಲ್ಲಿರುತ್ತವೆ. ಸಾಮಾನ್ಯವಾಗಿ ಆಚರಣೆಗಳು ಕ್ರಿಯಾ ರೂಪದಲ್ಲಿರುತ್ತವೆ. ನಂಬಿಕೆಗಳು ಆಚರಣೆಗಳಿಗೆ ಶಾಸನಗಳಂತಿದ್ದು ನಿರಂತರತೆಯನ್ನು ಕಾಪಾಡಿಕೊಂಡು ಹೋಗಲು ಸಹಕಾರ ನೀಡುತ್ತವೆ. ಒಟ್ಟಿನಲ್ಲಿ ನಂಬಿಕೆಗಳು ಆಚರಣೆಗಳು ಒಂದೇ ನಾಣ್ಯದ ಎರಡು ಮುಖಗಳೆಂದು ಹೇಳಬಹುದು.

ನಂಬಿಕೆ:- ಮಾನವನ ಬದುಕು ನಂಬಿಕೆಗಳನ್ನು ಆಧರಿಸಿಯೇ ರೂಪಗೊಂಡಿದೆ. ವ್ಯಕಿಯಿಂದ ವ್ಯಕ್ತಿಗೆ, ಜನಾಂಗದಿಂದ ಜನಾಂಗಕ್ಕೆ ಕಾರ್ಯಮಾಡುವ ಕ್ರಮ, ಗ್ರಹಿಕೆ, ಕಲ್ಪನಾಶಕ್ತಿ ಮೊದಲಾದವುಗಳ ಆಧಾರದಲ್ಲಿ ವಿಭಿನ್ನ ನಂಬಿಕೆಗಳು ಆಚರಣೆಯಲ್ಲಿರುತ್ತವೆ. ಒಂದು ಜನಾಂಗವು ಹಲವಾರು ವಿಧಾನಗಳ ಮೂಲಕ ತನ್ನಲ್ಲಿರುವ ನಂಬಿಕೆಗಳನ್ನು ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ವರ್ಗಾಯಿಸುತ್ತಾ ಅದರ ಪಾಲನೆಗೆ ಒತ್ತಡವನ್ನು ಹೇರುತ್ತದೆ. ಮಾನವನ ಆಸೆ, ಆಕಾಂಕ್ಷೆ, ಭೀತಿ, ಮೊದಲಾದವು ನಂಬಿಕೆಗಳ ಉಗಮ ಹಾಗೂ ಬೆಳವಣಿಗೆ ಕಾರಣವೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.

**ಮಾರಿಯಾ ಲೀಚ್ ಅವರ ಪ್ರಕಾರ:-**

"ಪುನರಾವರ್ತನೆಯಾಗುವ, ಸಾಮಾಜಿಕ ವೀಕ್ಷಣೆಯ ಫಲವಾಗಿ ಮೂಡುವ ಭೂತ, ವರ್ತಮಾನ ಹಾಗೂ ಭವಿಷ್ಯತ್ತುಗಳೊಂದಿಗೆ ಕಾರ್ಯಕಾರಣ ಸಂಬಂಧವನ್ನು ಹೊಂದಿರುವ ಸಾಂಪ್ರದಾಯಿಕ ಸ್ವೀಕೃತ ಪರಿಕಲ್ಪನೆಯೇ ಜನರ ನಂಬಿಕೆ" ಎಂದು ಹೇಳಿದ್ದಾರೆ.

**ಪ್ರೊ. ದೇ.ಜ.ಗೌ. ಅವರು· ನಂಬಿಕೆ ಕುರಿತು:-**

"ದೇಶ ಕಾಲಗಳ ಹಿನ್ನಲೆಯಲ್ಲಿ ಪರಂಪರಾನುಗತ ಜ್ಞಾನ, ಧೀರ್ಘಾನುಭವ, ಕಾಲ್ಪನಿಕ ಆಲೋಚನೆ ಹಾಗು ಅತೀಂದ್ರಿಯ ವ್ಯಾಪಾರದ ಫಲವಾಗಿ ಮೂಡಿದ ಶ್ರದ್ಧೆಯೇ ನಂಬಿಕೆ" ಎಂದಿದ್ದಾರೆ. ಜನರ ಕೆಲಸ ಆಲೋಚನೆ, ರೂಡಿ, ಜೀವನಕ್ರಮ, ಸಂಪ್ರದಾಯ, ಆಚರಣೆಗಳೆಲ್ಲವು ಮೂಲಭೂತವಾಗಿ ನಂಬಿಕೆಗಳಿಂದ ಪ್ರೇರಿತವಾದವು. ನಂಬಿಕೆಯು ಸಂಪ್ರದಾಯ ಹಾಗೂ ಆಚರಣೆಗಳೊಂದಿಗೆ ಅಂತರ್ ಸಂಬಂಧವನ್ನು ಹೊಂದಿದ್ದು ಆ ಮೂಲಕ ಅದು ಕ್ರಿಯಾರೂಪವನ್ನು ತಾಳುತ್ತದೆ. ಜಾನಪದದ ಪ್ರಕಾರಗಳದ ಗಾದೆ, ವೈದ್ಯ, ಕಥೆ, ಐತಿಹ್ಯ, ಪುರಾಣ, ಮಂತ್ರವಿದ್ಯೆ, ಧರ್ಮ ಮೊದಲಾದವುಗಳೊಂದಿಗೆ

ನಂಬಿಕೆಗಳು ಒಳ ಸಂಬಂಧವನ್ನು ಹೊಂದಿರುತ್ತವೆ. ಇತಂಹ ಆಚರಣೆಗಳು ಮಲ್ಲಯ್ಯನ ಕುರಿತಾಗಿ ಇರುವುದನ್ನು ನೋಡುತ್ತೆವೆ. ಜನರು ಪ್ರಸ್ತುತವಾಗಿಯೂ ನಂಬಿರುವ ಆಚರಣೆಗಳು ಈ ಕೆಳಕಂಡಂತಿವೆ.

**೫.೧ ನಂಬಿಕೆಗಳು**

೧. ಭಾನುವಾರ ಮೈಲಾರನ ಭಕ್ತರಿಗೆ ಪವಿತ್ರದಿನ :- ಮೈಲಾರನ ಅವತಾರವಾಗಿರುವುದು ಮಣೀಕ ಹಾಗೂ ಮಲ್ಲಾಸುರರ ಸಂಹಾರಕ್ಕಾಗಿ ಅವನು ಅವತಾರ ತಾಳಿದ್ದು ಮಾರ್ಗಶಿರ ಶುದ್ಧ ಷಷ್ಠಿ ಭಾನುವಾರದಂದು ಆದ್ದರಿಂದ ಮೈಲಾರನ ಅವತಾರದ ದಿನವೆಂದು ಮಲ್ಲಯ್ಯನ ಭಕ್ತರು ಭಾನುವಾರವನ್ನು ಪವಿತ್ರ ದಿನವೆನ್ನುತ್ತಾರೆ. ಈ ಕಾರಣದಿಂದ ಏನೇ ವಿಶೇಷ ಕಾರ್ಯಗಳನ್ನು ಮಾಡುವುದಿದ್ದರೂ ಭಾನುವಾರದಂದು ಮಾಡುವುದು ವಾಡಿಕೆ, ಉಪವಾಸವಿರುವುದು, ದೇವಸ್ಥಾನಕ್ಕೆ ಹೋಗುವುದು, ಹೊಸಬಟ್ಟೆ, ಪಾತ್ರೆ ತರುವುದು, ದ್ಯೋಣಿತುಂಬುವುದು ಮೊದಲಾದವನ್ನು ಅವರು ಭಾನುವಾರವೇ ಮಾಡುವರು. ಇದೇ ರೀತಿಯ ನಂಬಿಕೆಗಳನ್ನು ವಿಭಿನ್ನ ಸಂಪ್ರದಾಯದಲ್ಲಿಯು ಕಾಣಬಹುದು.

ಉದಾ:- ಮಂಗಳವಾರ, ಶುಕ್ರವಾರದಂದು ಹೆಣ್ಣು ದೇವತೆಗಳ ಹೆಸರಿನಲ್ಲಿ ನೋಡಬಹುದು.

೨. ಅಗಿ ಹುಣ್ಣಿಮೆಯ ದಿನದಂದು ಮಲ್ಲಯ್ಯನ ಮದುವೆ ಸಂದರ್ಭದಲ್ಲಿ ಹಾಲು ಉಕ್ಕಿಸುವುದು ಅದು ಯಾವ ದಿಕ್ಕಿಗೆ ಉಕ್ಕಿ ಹರಿಯುವುದೋ ಆ ದಿಕ್ಕಿನಲ್ಲಿ ಮಳೆ ಬೆಳೆ ಹೆಚ್ಚುವುದು ಎಂಬ ನಂಬಿಕೆ ಜನರಲ್ಲಿದೆ. ಸಾಮಾನ್ಯವಾಗಿ ಹೊಸಮನೆಯ ಪ್ರವೇಶದ ಸಂದರ್ಭದಲ್ಲಿ ಹಾಲು ಉಕ್ಕಿಸುವುದನ್ನು ಕಾಣುತ್ತೇವೆ. ಆದರೆ ಆ ಆಚರಣೆಗಳಲ್ಲಿ ಈ ಸಂಪ್ರದಾಯವನ್ನು ನೊಡುತ್ತೇವೆ.

೩. ಅಗಿ ಹುಣ್ಣಿಮೆಯಂದು ಮಲ್ಲಯ್ಯನ ಮದುವೆಯ ಸಂದರ್ಭ. ಈ ಕಾರ್ಯಕ್ಕೆ ಮೊದಲೇ ನದಿಯ ದಡದ ಮಣ್ಣು ತಂದು ಒಂಬತ್ತು ಹೊಸ ಮಡಿಕೆಗಳಲ್ಲಿ ಜೋಳ, ಭತ್ತ, ಹೆಸರು, ಕಡಲೆ, ಗೋದಿ, ಎಳ್ಳು, ನವಣೆ, ಹಾಗೂ ಉದ್ದು ಹೀಗೆ ಒಂಬತ್ತು ವಿಧವಾದ ಧಾನ್ಯಗಳನ್ನು ಹಾಕುವರು ಈ ಮಡಿಕೆಗಳಲ್ಲಿ ಹಾಕಿದ ಕಾಳುಗಳು ಮಲ್ಲಯ್ಯನ ಮದುವೆಯ ಹೊತ್ತಿಗೆ ಚೆನ್ನಾಗಿ ನಾಟಿಕೊಂಡು ಮೊಳಕೆಯೊಡೆದಿರುತ್ತವೆ. ಮಧುವೆಗೆ ಬಂದ ಭಕ್ತರು ಈ ಬೆಳೆಗಳಲ್ಲಿ ಯಾವ ಅಗಿಗಳು ಸಮೃದ್ಧವಾಗಿ ಬಂದಿವೆಯೋ ಆ ವರ್ಷ ಆ ಬೆಳೆ ಚೆನ್ನಾಗಿ ಬರುವುದೆಂದು ತಿಳಿದು ತಮ್ಮ ಹೊಲಗಳಲ್ಲಿ ಅದೇ ಬೆಳೆಯನ್ನು ಬಿತ್ತುವರು.

ಈ ನಂಬಿಕೆಯ ಹಿಂದೆ ವೈಜ್ಞಾನಿಕ ತಳಹದಿಯೂ ಇರುವುದನ್ನು ನಾವು ಕಾಣಬಹುದಾಗಿದೆ. ಸಾಮಾನ್ಯವಾಗಿ ಬೆಳೆಯನ್ನು ಬಿತ್ತುವಾಗ ಮುಂದೆ ಅದು ಹೇಗೆ ಬರುವುದೆಂದು ಮೊದಲೇ ಪರೀಕ್ಷಿಸಿ ನಂತರ ಹೊಲದಲ್ಲಿ ಬಿತ್ತುವ ಕ್ರಮದಿಂದ ಭವಿಷ್ಯದಲ್ಲಿ ಉತ್ತಮ ಬೆಳೆಯನ್ನು ಪಡೆಯಬಹುದು ಎಂಬ ಅನುಭವ ಈ ನಂಬಿಕೆಯ ಹಿಂದಿರುವುದನ್ನು ನಾವು ಗಮನಿಸಬಹುದು.

೪. ರಥೋತ್ಸವದಲ್ಲಿ ಹೊಳಗುಂದ ಗ್ರಾಮದ ಭಕ್ತರು ತೆಕ್ಕಲಕೋಟೆಗೆ ಬಂದು ಪೂಜೆಯನ್ನು ಮಾಡಿ ರಥವನ್ನು ಎಳೆದರೆ ಮಾತ್ರ ಮುಂದಕ್ಕೆ ಬರುತ್ತದೆ ಮತ್ತು ಯಾವುದೇ ಅನಾಹುತಗಳು

ಸಂಭವಿಸುವುದಿಲ್ಲ ಎನ್ನುವುದು ಅಲ್ಲಿನ ಜನರ ನಂಬಿಕೆಯಾಗಿದೆ. ಇದಕ್ಕೆ ಸಾಕ್ಷಿ ಎನ್ನುವಂತೆ ಒಂದು ಘಟನೆಯೂ ನಡೆದಿದೆ. ತೆಕ್ಕಲಕೋಟೆಯ ಗ್ರಾಮಸ್ತರು ತೇರನ್ನು ಎಳೆಯಲು ಮುಂದಾದಾಗ ವ್ಯಕ್ತಿಯೊಬ್ಬನು ರಥದ ಗಾಲಿಗೆ ಬಿದ್ದು ಮರಣ ಹೊಂದಿದ್ದಾನೆ ಈ ಘಟನೆಯು ಸ್ಥಳೀಯರಲ್ಲಿ ಘಾಡವಾದ ಪರಿಣಾಮ ಬೀರಿದೆ.

೫. ಮಲ್ಲಯ್ಯ ಕುರುಬರ ಮಾಳವ್ವನಿಗಾಗಿ ಕುರಿದೊಡ್ಡಿಯಲ್ಲಿ ಆಳಾಗಿ ದುಡಿದ. ಆಗ ನಾಯಿಗಳು ತಿನ್ನುತ್ತಿದ್ದ ದೋಣಿಯಲ್ಲಯೇ ಅವನು ಊಟಮಾಡಿದ. ಆ ಕಾರಣಕ್ಕಾಗಿ ಗೊರವರು ದೋಣಿಯಲ್ಲಿ ಊಟಮಾಡುವರು ಎಂಬ ನಂಬಿಕೆಯೂ ಗೊರವರಲ್ಲಿದೆ.

೬. ಮೈಲಾರ ದೇವರಿಗೆ ಜಾತಿಪಾತಿಗಳ ಅಡ್ಡಿಯಿಲ್ಲ ಇಲ್ಲಿ ಸೇವೆ ಸಲ್ಲಿಸುವ ಎಲ್ಲರೂ ಒಂದೇ ಎಂಬ ನಂಬಿಕೆಯಿದೆ. ಗೊರವರು ಕುರುಬಜಾತಿಗೆ ಸೇರಿದ್ದರೂ ಎಲ್ಲರು ಇವರಿಗೆ ಗೌರವ ನೀಡುತ್ತಾರೆ. ಬ್ರಾಹ್ಮಣರೂ ಸಹ ಯಾವುದೇ ನಿರ್ಭಂದಗಳಿಲ್ಲದೆ ಸಮಾನತೆಯನ್ನು ಪಾಲಿಸುತ್ತಾರೆ.

೭. ಹುರುಕು ಕಜ್ಜಿಗಳಾದವರು ದೇವಾಲಯದ ಆವರಣದಲ್ಲಿರುವ ಕೆಲವು ಶಿಲಾ ಮೂರ್ತಿಗಳ ಮೇಲೆ ಎಣ್ಣೆ ಮತ್ತು ಉಪ್ಪು ಸುರಿಯುತ್ತಾರೆ. ಈ ರೀತಿ ಮಾಡುವುದರಿಂದ ವ್ಯಾಧಿಗಳು ಗುಣವಾಗುತ್ತವೆಂಬ ನಂಬಿಕೆ ಪ್ರಚಲಿತದಲ್ಲಿದೆ.

೮. ಜನರು ತಮ್ಮ ಕ್ಷೇತ್ರದಲ್ಲಿರುವಂತ ಪ್ರಮುಖದೇವರನ್ನು ತಮ್ಮ ಇಷ್ಟ ದೈವವೆಂದು ಭಾವಿಸಿ. ಆತನನ್ನೇ ಮನೆಯ ದೇವರನ್ನಾಗಿ ಸ್ವೀಕರಿಸಿ ಆತನಿಗೆ ನಡೆದುಕೊಳ್ಳುತ್ತಾನೆ. ತನ್ನ ದೇವರಿಗೆ ಧಾನ್ಯಗಳನ್ನು ಮೀಸಲಿಡುವುದು, ತುಪ್ಪವನ್ನು ಅರ್ಪಿಸುವುದು ಮುಂತಾಗಿ ಸರ್ವವನ್ನೂ ಆತನಿಗೆ ಅರ್ಪಿಸುತ್ತಾರೆ. ಪ್ರತಿ ಕ್ಷಣದಲ್ಲಿಯೂ ಮಲ್ಲಯ್ಯನ ಸ್ಮರಣೆಯೇ ಈ ಕ್ಷೇತ್ರದ ಭಕ್ತರಿಗೆ ಮುಖ್ಯವಾಗಿಬಿಡುತ್ತದೆ. ನಮಗೆ ಜನಿಸಿರುವ ಮಗು ಅದು ಸ್ವಾಮಿ 'ಮಲ್ಲಯ್ಯನ' ಕೃಪೆ ಎಂದು ಸ್ವೀಕರಿಸಿ ಹುಟ್ಟಿದ ಗಂಡು ಮಗುವಿಗೆ ಆ ಹೆಸರನ್ನಿಡುತ್ತಾರೆ. ಹೆಣ್ಣಾದರೆ ಮಾಳಮ್ಮ ಎಂದು ಹೆಸರು ಇಡುತ್ತಾರೆ. ನಾಗರೀಕತೆಯ ಬೆನ್ನು ಹತ್ತಿದ ಕೆಲವರು ಹೆಸರುಗಳನ್ನು ಬೇರೆ ಬೇರೆಯದಾಗಿ ಇಟ್ಟರು ಸಹ ಹೆಸರಿಡುವಾಗ ಮಲ್ಲಯ್ಯ, ಮಾಳವ್ವ ಎಂದು ಕರೆದು ನಂತರ ಬೇರೆ ಹೆಸರನ್ನು ಇಡುತ್ತಾರೆ. ಈ ರೀತಿ ಹೆಸರಿಡುವುದರಿಂದ ವಂಶ ಚೆನ್ನಾಗಿ ಬೆಳೆಯುತ್ತದೆ ಎನ್ನುವಂತಹ ನಂಬಿಕೆ ಇದೆ.

೯. ಜಾತ್ರೆಯಲ್ಲಿ ಅಥವಾ ಇತರೆ ದಿನಗಳಲ್ಲಿ ಗೊರವಯ್ಯ ಕರಿ ಕಂಬಳಿಯಿಂದ ಉಣ್ಣೆಯನ್ನು ತೆಗೆದು ಚಿಕ್ಕ ಮಕ್ಕಳ ಉಡುದಾರಕ್ಕೆ ಕಟ್ಟಿ ಅವರ ಕಿವಿಯಲ್ಲಿ ಮಲ್ಲಯ್ಯ, ಮಲ್ಲಯ್ಯ ಎಂದು ಹೇಳಿ ಪಿಳ್ಳಂಗೋವಿ ಊದಿ, ಡಮರುಗ ಬಾರಿಸಿಸುತ್ತಾರೆ. ಈ ರೀತಿ ಮಾಡುವುದರಿಂದ ಮಕ್ಕಳಿಗೆ ಜ್ವರ, ಜಡ್ಡು, ಜಾಪತ್ರೆ ಯಾವುದೇ ಕಾಯಿಲೆ ಸುಳಿಯಲಾರವು ಎಂಬ ನಂಬಿಕೆ ಇದೆ.

೧೦. ಕೆಲವರಿಗೆ ನಿಗೂಢವಾದ ಕಾಯಿಲೆಗಳಿರುತ್ತವೆ ಅವುಗಳಲ್ಲಿ ಹೊಟ್ಟೆ ಹಸಿವು ಆಗದೇ ಇರುವುದು, ಏನು ಮಾಡದಿದ್ದರು ಕೈಕಾಲುಗಳು ಹಿಡಿದುಕೊಳ್ಳುವುದು, ಮೈ ಉರಿದಂತಾಗುವುದು, ಹೊಟ್ಟೆಯಲ್ಲಿ ಉರಿ, ಸಂಕಟ, ಆಗುವುದು, ಹೀಗೆ ಮನುಷ್ಯನಿಗೆ ಯಾವುದೇ ರೀತಿಯ

ತೊಂದರೆಗಳು ಕಾಣಿಸಿಕೊಂಡರೆ ಇದರ ಉಪಶಮನಕ್ಕಾಗಿ ಬಂಡಾರ, ಬಿಸಿ ನೀರು, ಬಿಲ್ವಪತ್ರ ಕಾಯಿಯೊಳಗಿನ ಅಂಟನ್ನು ತೆಗೆದುಕೊಂಡು ನೀರಿನೊಳಗೆ ಬೆರೆಸಿ ರೋಗಿಗೆ ಕುಡಿಸಿ "ದೇವ್ರು ಮಲ್ಲಯ್ಯ ಒಳ್ಳೆಯದು ಮಾಡುತ್ತಾನೆ ನಡೆಯಮ್ಮ ಏನು ಆಗುವುದಿಲ್ಲ" ಎಂದು ಹೇಳಿ ಕಳಿಸುತ್ತಾರೆ. ಇದರಿಂದ ರೋಗಿಯಲ್ಲಿರುವ ತೊಂದರೆ ಬೇಗನೆ ಗುಣಮುಖವಾಗುತ್ತದೆ ಎನ್ನುವ ನಂಬಿಕೆ ಇದೆ.

ಈ ರೀತಿಯಾಗಿ ಜನರಲ್ಲಿ ದೇವರ ಬಗೆಗೆ ನಂಬಿಕೆಗಳಿರುವುದು ನೊಡಬಹುದು, ಈ ನಂಬಿಕೆಗಳು ಒಂದು ರೀತಿ ಮನುಷ್ಯನಿಗೆ ಔಷಧಿ ಇದ್ದಂತೆ ಕಾಯಿಲೆ, ತೊಂದರೆ, ದೋಷ, ಮುಂತಾದವುಗಳಿಂದ ಕೂಡಿದ ವ್ಯಕ್ತಿಗೆ ದೇವರ ಪೂಜೆ ಮಾಡಿದರೆ ಗುಣಮುಖವಾಗುತ್ತದೆ, ಪರಿಹಾರವಾಗುತ್ತದೆ, ಎನ್ನುವ ಸಕರಾತ್ಮಕ ಶಕ್ತಿ ತುಂಬುತ್ತದೆ.

### ೫.೨ ಆಚರಣೆಗಳು

ಮೈಲಾರಲಿಂಗ ದೇವತೆ ಕೇವಲ ಕರ್ನಾಟಕಕ್ಕೆ ಮಾತ್ರ ಮೀಸಲಾದ ದೇವರಾಗಿರದೆ, ಹೊರನಾಡುಗಳಾದ ಆಂಧ್ರ, ತಮಿಳುನಾಡು, ಮಹಾರಾಷ್ಟ್ರ, ತೆಲಂಗಾಣ, ಗೋವೆ ಮುಂತಾದ ಕಡೆಗಳಲ್ಲೂ ಪ್ರತಿಷ್ಠಪನೆಗೊಂಡಿದ್ದು, ಮೈಲಾರಲಿಂಗ, ಮಲ್ಲಯ್ಯ, ಮೈಲಾರ, ಮೈಲಾರಿ, ಮಲ್ಲಾರಿ, ಖಂಡೋಬ, ಏಳುಕೋಟಿ, ಕರಿಯಾಲ, ಮೇಗನಾಥ, ನಿಂಗಣ್ಣ ಎಂಬ ಅನೇಕ ಹೆಸರುಗಳಿಂದ ಪೂಜೆಗೊಳ್ಳುತ್ತಿದ್ದಾನೆ. ಅಸ್ಪೃಶ್ಯರಿಂದ ಹಿಡಿದು ಬ್ರಾಹ್ಮಣರವರೆಗೆ ಅನೇಕರಿಗೆ ಮನೆ ದೇವರಾಗಿರುವ ಮಲ್ಲಯ್ಯ ಕುತೂಹಲ ಕೆರಳಿಸುವ ದೇವತೆಯಾಗಿದ್ದು ವಿವಿಧ ರೀತಿಯ ಆಚರಣೆಗಳಿರುವುದನ್ನು ಗಮನಿಸಬಹುದು. ಆಚರಣೆಗಳನ್ನು ೨ ರೀತಿಯಲ್ಲಿ ವರ್ಗೀಕರಿಸಲಾಗಿದೆ.

೧. ವಾರ್ಷಿಕಾವರ್ತನದ ಆಚರಣೆಗಳು ಮತ್ತು ೨. ಜೀವನಾವರ್ತನದ ಆಚರಣೆಗಳು.

### ೫.೨.೧ ವಾರ್ಷಿಕಾವರ್ತನದ ಆಚರಣೆಗಳು

#### ದಿನಂಪ್ರತಿ

ತೆಕ್ಕಲಕೋಟೆ ಮಲ್ಲಯ್ಯ ಸಮಾಜದ ಎಲ್ಲಾ ವರ್ಗದವರಿಗೂ ಮನೆ ದೇವರಾಗಿರುವುದು ವಿಶೇಷ. ಪ್ರತಿನಿತ್ಯ ಭಕ್ತರು ಈತನ ಸ್ಮರಣೆ ಮಾಡದಲೇ ಏಳುವುದಿಲ್ಲ. ಅವರ ಪ್ರತಿ ಉಸಿರಿನಲ್ಲೂ ಸ್ವಾಮಿ ಮಲ್ಲಯ್ಯ ತುಂಬಿರುವನು. ಮನೆಯಲ್ಲಿ ಮಲ್ಲಯ್ಯನ ಗುರುತುಗಳಾಗಿ ಭಕ್ತರು ಬೇರೆ ದೇವರುಗಳ ಭಾವಚಿತ್ರದೊಂದಿಗೆ ಈಶ್ವರನ, ಮಾಳಮ್ಮನ, ನಂದಿಯ ಭಾವಚಿತ್ರಗಳನ್ನು ಕೆಲವರು ಇಟ್ಟುಕೊಳ್ಳುತ್ತಾರೆ. ಇನ್ನು ಗುಣಾಚಾರಿಗಳು, .ವಗ್ಗರು, ಕಾಂಚವೀರರು, ಕುದುರೆಕಾರರು, ಬಸಿವೆಯರು ಮುಂತಾದ ದೀಕ್ಷೆ ವಹಿಸಿದವರ ಮನೆಯಲ್ಲಿ ತ್ರಿಶೂಲ, ಡಮರು, ಪಿಳ್ಳಂಗೋವಿ, ಮದ್ದಲಿ ಇತರ ದೇವರುಗಳ ಭಾವಚಿತ್ರಗಳ ಜೊತೆಗೆ ಮಲ್ಲಯ್ಯನ ಭಾವಚಿತ್ರವನ್ನು ದೇವರ ಗದ್ದಗೆಯಲ್ಲಿ ಇಟ್ಟು ನಿತ್ಯವೂ ಪೂಜೆ ಸಲ್ಲಿಸುತ್ತಾರೆ. ಪ್ರತಿನಿತ್ಯ ಭಕ್ತರು ಹೊತ್ತು ಹುಟ್ಟುವ ಮುಂಚೆ ಎದ್ದು ತಮ್ಮ ನಿತ್ಯ ಕೃತ್ಯಗಳನ್ನು ಮುಗಿಸಿಕೊಂಡನಂತರ ಜಳಕ ಮಾಡಿ ಹಣೆಗೆ ಭಂಡಾರ, ವಿಭೂತಿಯನ್ನು ಅಚ್ಚಿ ಸ್ವಾಮಿಗೆ ಊದಿನಕಡ್ಡಿಯನ್ನು ಬೆಳಗುತ್ತಾರೆ. ಈ ಆಚರಣೆ ಬಹುತೇಕ ಕ್ಷೇತ್ರದ ಎಲ್ಲಾ ಜನವರ್ಗಗಳಲ್ಲಿ ಕಾಣುತ್ತೇವೆ. ಆದರೆ ದೀಕ್ಷೆಯನ್ನು ತೆಗೆದುಕೊಂಡವರು ತಪ್ಪದೆ ದಿನಾಲು ಜಳಕಮಾಡಿ, ಸ್ವಾಮಿ ಆಭರಣಗಳಾದ

ತ್ರಿಶೂಲ, ಡಮರು, ಪಿಳ್ಳಂಗೋವಿ ಮುಂತಾದವುಗಳನ್ನು ಬಟ್ಟೆಯಿಂದ ಒರೆಸಿ ದೇವರ ಗದ್ದುಗೆಯನ್ನು ಚೊಕ್ಕಟವಾಗಿಟ್ಟು ಪೂಜೆ ಕಾರ್ಯಕ್ರಮ ಮುಗಿದಮೇಲೆ ಆಹಾರವನ್ನು ಸೇವಿಸುವುದು, ಅಲ್ಲಿಯವರೆಗೆ ಯಾವುದೇ ಪಾನಿಯವನ್ನು ಮುಟ್ಟುವಂತಿಲ್ಲ. ದೀಕ್ಷೆ ಪಡೆದ ಕುಟುಂಬಗಳು ಬಹುತೇಕ ಇದೇ ತೆರನಾದ ಆಚರಣೆಯನ್ನು ಕೈಗೊಳ್ಳುತ್ತಾರೆ. ಆದರೆ ಕೆಲವರು ಪ್ರತಿನಿತ್ಯ ಈ ರೀತಿಯ ಕಟ್ಟುನಿಟ್ಟಾದ ಪೂಜಾ ವಿಧಾನವನ್ನು ಮಾಡದೇ ಸಾಧರಣವಾಗಿ ಕೈಕಾಲು ಮುಖವನ್ನು ತೊಳೆದುಕೊಂಡು ಭಂಡಾರವನ್ನು ಹಚ್ಚಿ ಪೂಜೆಯನ್ನು ಸಲ್ಲಿಸುತ್ತಾರೆ.

ದೇವಸ್ಥಾನದಲ್ಲಿ ಪೂಜೆ ಮಾಡುವ ಅಧಿಕಾರ ಸ್ಥಳೀಯರಾದ ಲಿಂಗಾಯತ ವರ್ಗದವರಿಗೆ ಇರುವುದರಿಂದ ಇವರು ದಿನಾಲು ಬೆಟ್ಟದ ಮೇಲೆ ಹೋಗಿ ದೇವರಿಗೆ ಪೂಜೆಮಾಡಿ ಕಾಯಿ ಕರ್ಪೂರ ಬೆಳಗಿ ಅಭಿಷೇಕವನ್ನು ಮಾಡುತ್ತಾರೆ. ಗೊರವರು ಕೆಲವು ದಿನಗಳಲ್ಲಿ ದೇವರ ಹೆಸರುಗಳಿಗೆ ಭಕ್ತರು ಕರೆಯಲು ಬಂದರೆ ಅವರ ಕೆಲಸ ಕಾರ್ಯಗಳಿಗೆ ಹೋಗುತ್ತಾರೆ. ಅವರ ಮನೆಯಲ್ಲಿ ಪೂಜಾ ಕಾರ್ಯಕ್ರಮವನ್ನು ನೆರವೇರಿಸಿ ಬರುತ್ತಾರೆ. ಹರಿಜನರಲ್ಲಿ ಹೆಚ್ಚಾಗಿ ದೀಕ್ಷೆ ವಹಿಸಿಕೊಂಡಂತ ಬಸಿವೆಯರು ದಿನಾಲು ತಪ್ಪದೆ ಜಳಕ ಮಾಡಿ ಸ್ವಾಮಿಯ ಪೂಜೆನ್ನು ಮಾಡಿ ಭಿಕ್ಷಾಟನೆಗೆ ಹೋಗುತ್ತಾರೆ. ಗೊರವರು ಸಹ ಅಷ್ಟೇ. ಆದರೆ ಈ ಕ್ಷೇತ್ರದಲ್ಲಿ ಭಿಕ್ಷಾಟನೆಗೆ ಹೋಗುವುದು ತುಂಬಾ ವಿರಳ. ಬಸವಿಯರು ತಮ್ಮ ಉಪಜೀವನಕ್ಕಾಗಿ ಭಿಕ್ಷಾಟನೆಯನ್ನೇ ಅವಲಂಬಿಸಿದ್ದಾರೆ. ಉಳಿದಂತೆ ಬಹುತೇಕ ಜನರು ಈ ಆಚರಣೆಯನ್ನು ಭಾನುವಾರವೋ, ಅಮವಾಸೆಗೋ, ಆಚಾರವೆಂಬಂತೆ ೫-೬ ಮನೆಗಳಿಗೆ ಹೋಗಿ ಭಿಕ್ಷೆಯನ್ನು ಬೇಡುತ್ತಾರೆ.

ಗೊರವರೆಲ್ಲ ಪ್ರತಿನಿತ್ಯದ ಪೂಜೆಯನ್ನು ಮುಗಿಸಿಕೊಂಡ ಮೇಲೆ ಬೇಸಾಯದ ಕೆಲಸಗಳಲ್ಲಿ ತೊಡಗುತ್ತಾರೆ. ಈ ಕ್ಷೇತ್ರದಲ್ಲಿ ಕೆಲವು ಕುಟುಂಬಗಳಿಗೆ ಮನೆದೇವರು ಬೇರೆಯಾಗಿದ್ದರೂ ಸಹ ಅವರು ಮಲ್ಲಯ್ಯನನ್ನು ತಪ್ಪದೇ ಪೂಜಿಸುತ್ತಾರೆ. ಆತನಿಂದ ಫಲಗಳನ್ನು ಸಹ ಪಡೆದುಕೊಂಡಿದ್ದಾರೆ. ಒಟ್ಟಾರೆ ಸ್ವಾಮಿ ಮಲ್ಲಯ್ಯನ ಭಕ್ತರು ಈತನನ್ನು ಪ್ರತಿನಿತ್ಯ ಪೂಜಿಸಿ ತಮ್ಮ ಕಾರ್ಯದಲ್ಲಿ ತೊಡಗುವರು.

**ವಾರದ ದಿನಗಳಲ್ಲಿ**

ಮಲ್ಲಯ್ಯನಿಗೆ ಭಾನುವಾರ ಅತಿ ಶ್ರೇಷ್ಠವಾದ ದಿನ. ಆ ದಿನ ಮಲ್ಲಯ್ಯನಿಗೆ ಭಕ್ತರು ವಿಶೇಷ ಪೂಜೆಯನ್ನು ಸಲ್ಲಿಸುತ್ತಾರೆ. ಮಲ್ಲಯ್ಯನನ್ನು "ಆಯಿತವಾರದಯ್ಯ" ಅಂತ ಕರೆಯುತ್ತಾರೆ. ಭಾನುವಾರದ ದಿನ ಮನೆಯನ್ನು ಸ್ವಚ್ಚಗೊಳಿಸಿ ಜಳಕಮಾಡಿದನಂತರ ದೇವರ ಭಾವಚಿತ್ರ, ಮತ್ತು ಆಭರಣಗಳನ್ನು ತೋಳೆದು ಭಂಡಾರವನ್ನು ಅಚ್ಚಿ ಹೂ-ಪತ್ರಿಗಳನ್ನು ಏರಿಸಿ ಪೂಜೆಯನ್ನು ಮಾಡುತ್ತಾರೆ. ಸಿಹಿ ಪದಾರ್ಥನ್ನು ಮಾಡಿ ದೇವರಿಗೆ ಎಡೆಯನ್ನು ಇಡುತ್ತಾರೆ. ಭಾನುವಾರದಂದು ಹೆಚ್ಚಿನ ಸಂಖ್ಯೆಯಲ್ಲಿ ಭಕ್ತರು ದೇವಸ್ಥಾನಕ್ಕೆ ಬಂದು ಹೂವು, ಕಾಯಿ, ಕರ್ಪೂರವನ್ನು ಮಲ್ಲಯ್ಯನಿಗೆ ಸಮರ್ಪಿಸುತ್ತಾರೆ. ಪೂಜಾರಿಗಳು ಮಂಗಳಾರತಿ ಮಾಡಿ ತಂದಿರುವ ಫಲವನ್ನು ಭಕ್ತರಿಗೆ ತಿರುಗಿ ನೀಡುತ್ತಾರೆ. ಕೆಲವರು ಮಲ್ಲಯ್ಯನಿಗೆ ಎಲೆ ಪೂಜೆಯನ್ನು, ಬಾಳೆಹಣ್ಣಿನ ಪೂಜೆಯನ್ನು, ಅಭಿಷೇಕ, ಕುಂಕುಮಾರ್ಚನೆ ಮುಂತಾದ ವಿಶೇಷ ಪೂಜೆಗಳನ್ನು ಸಹ ಮಾಡಿಸುತ್ತಾರೆ.

ಬಹುತೇಕ ಎಲ್ಲಾ ಮಲ್ಲಯ್ಯನ ಭಕ್ತರ ಮನೆಯಲ್ಲಿ ಪೂಜಾ ಕಾರ್ಯಕ್ರಮವಿರುತ್ತದೆ. ದೇವರಿಗೆ ಎಡೆಹಾಕಿ, ಪೂಜೆ ಆಗುವತನಕ ಊಟ ತಿಂಡಿಯನ್ನು ಸೇವಿಸುವಂತಿಲ್ಲ. ಗೊರವರು ಆದಿನ ಮನೆಯಲ್ಲಿ ಪೂಜಾ ಕಾರ್ಯಕ್ರಮಗಳು ನೆರವೇರಿಸಿದ ನಂತರ ಉಡುಪುಗಳೊಂದಿಗೆ ಜೋಳಿಗೆ, ಭಂಡಾರದ ಚೀಲ, ತ್ರಿಶೂಲ, ಡಮರುಗ, ಹಿಡಿದು ಭಿಕ್ಷಾಟನೆಗೆ ತೆರಳುತ್ತಾರೆ. ಭೀಕ್ಷಾಟನೆಗೆ ಹೋಗದವರು ದೇವಸ್ಥಾನಕ್ಕೆ ಬರುತ್ತಾರೆ. ಆದಿನ ಯಾವುದೇ ರೀತಿಯಿಂದ ಭಕ್ತರು ಮಾಂಸದ ಅಡುಗೆ ಮಾಡುವುದು ನಿಷೇದ.

### ಅಮವಾಸ್ಯೆ

ಅಮವಾಸ್ಯೆಯ ದಿನದಂದು ಭಕ್ತರು ಪ್ರತಿಭಾನುವಾರ ಮನೆಯಲ್ಲಿ ಯಾವರೀತಿ ಪೂಜಾ ಕಾರ್ಯಕ್ರಮವನ್ನು ನೆರವೆರಿಸುತ್ತಾರೋ ಅದೇ ತೆರನಾಗಿ ಇರುತ್ತದೆ. ಇದರಲ್ಲಿ ಯಾವುದೇ ರೀತಿ ಬದಲಾವಣೆಯಿಲ್ಲ. ಕೆಲವು ಭಕ್ತರು ಮನೆಯಲ್ಲಿ ಮಲ್ಲಯ್ಯನಿಗೆ ಕಾಯಿಯನ್ನು ಒಡೆದುಕೊಳ್ಳುತ್ತಾರೆ ಮತ್ತು ದೇವಸ್ಥಾನಕ್ಕೆ ತಪ್ಪದೆ ಬರುವ ಪದ್ಧತಿ ಇದೆ. ಆ ದಿನ ದೇವಸ್ಥಾನದಲ್ಲಿ ಮಲ್ಲಯ್ಯನಿಗೆ ವಿಶೇಷ ಪೂಜೆ ಪುನಸ್ಕಾರಗಳು ಸಹ ನೆರವೇರಿಸುತ್ತಾರೆ. ಕ್ಷೇತ್ರದಲ್ಲಿ ಜನರ ಗದ್ದಲ ಜಾಸ್ತಿಯೇ ಇರುತ್ತದೆ. ಭಕ್ತರ ಓಡಾಟ ಚುರುಕಾಗಿರುತ್ತದೆ. ಕುಂಕುಮ ಭಂಡಾರದ ಪೊಟ್ಟಣಗಳನ್ನು ಮಾರುವವರು, ಹೂ, ಕಾಯಿ, ಹಣ್ಣು, ಕರ್ಪೂರ, ಉದಿನಕಡ್ಡಿ, ಮಾರುವವರು ಹಾಗೂ ಚಿಕ್ಕ, ಚಿಕ್ಕ ಅಂಗಡಿಯವರು ಹೀಗೆ ಒಂದು ಸಣ್ಣ ಪರಸೇ ಇರುತ್ತದೆ. ಗರ್ಭಗುಡಿಯಲ್ಲಿ ಭಕ್ತರು ಜಾಸ್ತಿಯಾಗಿದ್ದು, ಅವರು ತಂದ ಕಾಯಿ, ಕರ್ಪೂರ, ಉದಿನಕಡ್ಡಿ, ಹೂ, ಹಣ್ಣನ್ನು ದೇವರಿಗೆ ಅರ್ಪಿಸಿ ಪ್ರಸಾದದ ರೂಪದಲ್ಲಿ ಭಂಡಾರವನ್ನು ಕಾಯಿಯ ಬಟ್ಟಲಲ್ಲಿ ತುಂಬಿಕೊಡುತ್ತಾರೆ. ಹರಕೆ ಹೊತ್ತಿದ್ದರೆ ಮೀಸಲಿಟ್ಟ ಧವಸದಾನ್ಯಗಳನ್ನು ನೀಡುತ್ತಾರೆ. ಪಕ್ಕದಲ್ಲಿರುವ ಗಂಗಿಮಾಳಮ್ಮ ಮತ್ತು ತುಪ್ಪದಮಾಳಮ್ಮನ ಗುಡಿಗೆ ಬಂದು ದರ್ಶನ ಪಡೆದು ಮೀಸಲಿಟ್ಟ ಎಣ್ಣೆ ತುಪ್ಪವನ್ನು ಅರ್ಪಿಸಿ ಸಂತೃಪ್ತರಾಗುತ್ತಾರೆ. ಆ ದಿನ ಮಧ್ಯಹ್ನ ದೇವಸ್ಥಾನದಲ್ಲಿ ಬಂದ ಭಕ್ತರಿಗೆ ಅನ್ನದಾಸೋಹವಿರುತ್ತದೆ. ಈ ದಾಸೋಹವನ್ನು ಮುಗಿಸಿಕೊಂಡು ಭಕ್ತರು ತಮ್ಮ ಊರುಗಳಿಗೆ ತೆರಳುತ್ತಾರೆ.

### ಶ್ರಾವಣಮಾಸ

ಶ್ರಾವಣ ಸೋಮವಾರದಂದು ರುದ್ರಾಭಿಷೇಕ ಮಾಡುವುದು, ಎಲೆ ಪೂಜೆಯನ್ನು ಕಟ್ಟಿಸುವುದು ಮುಂತಾದ ಕಾರ್ಯಕ್ರಮಗಳು ನಡೆಯುತ್ತವೆ. ಅಂದು ತುಂಗಭದ್ರನದಿಗೆ ಹೋಗಿ ಮಡಿಯಿಂದ ತುಂಬಿದ ಕೊಡವನ್ನು ತಂದು ಗಂಗಾ ಪೂಜೆಯನ್ನು ಮಾಡಲಾಗುತ್ತದೆ. ಸುತ್ತಮುತ್ತಲಿನ ಹಳ್ಳಿಗಳಲ್ಲಿರುವ ಕಬ್ಬೇರು, ನಾಯಕರು, ಗೊಲ್ಲ ಮೊದಲಾದ ಜನಾಂಗಕ್ಕೆ ಸೇರಿದ ಭಕ್ತರು ಹೆಚ್ಚಿನ ಸಂಖ್ಯೆಯಲ್ಲಿ ಬಂದು ತಮ್ಮ ಹರಕೆ ಗಳನ್ನು ಅರ್ಪಿಸುತ್ತಾರೆ. ದೀಡು ನಮಸ್ಕಾರವನ್ನು ಹಾಕುವುದು ಮತ್ತು ಮಂಡಿಯಿಂದ ಪ್ರದಕ್ಷಿಣೆ ಹಾಕಿ ಮಲ್ಲಯ್ಯನಿಗೆ ಹರಕೆ ಯನ್ನು ತೀರಿಸುತ್ತಾರೆ. ನಾಗರ ಅಮವಾಸ್ಯೆಯಂದು ಮಲ್ಲಯ್ಯ, ಮಾಳವ್ವರು, ಪಲ್ಲಕ್ಕಿಯಲ್ಲಿ ತುಂಗಭದ್ರೆಗೆ ಹೋಗಿ ಹೊಳೆಸ್ನಾನ ಮಾಡುತ್ತಾರೆ. ಅಂದು ಗುಡ್ಡದ ಮೇಲಿರುವ ಎಲ್ಲಾ ದೇವರಿಗೆ ಪೂಜೆ ಮಾಡಲಾಗುತ್ತದೆ.

**ವಿಜಯದಶಮಿ**

ವಿಜಯದಶಮಿಯಂದು ಬನ್ನಿ ಮುಡಿಯುವ ಕಾರ್ಯಕ್ರಮವಿರುತ್ತದೆ. ಇದಕ್ಕೆ ಉತ್ತರ ಕರ್ನಾಟಕದಲ್ಲಿ ವಿಶೇಷ ಮಹತ್ವವಿದೆ. ವಿಜಯದ ಸಂಕೇತವಾಗಿ ಬನ್ನಿ ಮರದ ಬಳಿ ಹೋಗಿ ಕಾಳಿಯ ಪೂಜೆಯನ್ನು ಮಾಡಿ ಬನ್ನಿಯನ್ನು ತರುವರು ನಂತರ ಊರ ಹೊರಗಿನ ಶಿಭಾರಕ್ಕೆ ಹೋಗಿ ಬನ್ನಿ ಮುಡಿದು ಬರುತ್ತಾರೆ.

**ನಿಶ್ಚಿತಾರ್ಥ**

ದಸರ ಅಮವಾಸ್ಯೆಯಾಗಿ ೫ನೇ ದಿನವಾದ ಅಶ್ವಿನಿ ಶುದ್ಧ ಪಂಚಮಿಯಂದು ಶ್ರೀ ಮಾಳ ಮಲ್ಲೇಶ್ವರರಿಗೆ ಪಂಚಾಮೃತ ಮತ್ತು ಏಕಾದಶವಾದ ರುದ್ರಾಬಿಷೇಕ ಮಾಡುತ್ತಾರೆ. ಸ್ವಾಮಿ ಮಲ್ಲೇಶ್ವರನಿಗೆ ಹೆಣ್ಣನ್ನು ಖಾಯಂ ಮಾಡುವ ನಿಶ್ಚಿತಾರ್ಥ ಕಾರ್ಯಕ್ರಮ ಆ ದಿನ ವಿಶೇಷವಾಗಿ ನಡೆಯುತ್ತದೆ. ಈ ಕಾರ್ಯಕ್ರಮಕ್ಕೆ ಸಂಜೆ ೭ ರ ಹೊತ್ತಿಗೆ ಗ್ರಾಮದ ಪುರೋಹಿತರು, ಅರ್ಚಕರು, ಕಾಂಚವೀರರು, ಮದಲಿ ಗೊರವಯ್ಯನವರು ಹೊಳಗುಂದ ಭಕ್ತರು, ಮುಂತಾದವರು ದೇವಸ್ಥಾನಕ್ಕೆ ಬಂದು ಸೇರುತ್ತಾರೆ. ಕಂಕಣಕ್ಕೆ ಪುರೋಹಿತರು ಸಕಲ ಸಿದ್ಧತೆಗಳನ್ನು ಮಾಡಿಕೊಂಡು ಮಲ್ಲೇಶ್ವರನಿಗೆ ಮಂತ್ರವನ್ನು ಪಠಿಸುವುದರೊಂದಿಗೆ ೫ ಜನರಿಗೆ ಕಂಕಣಧಾರಣೆಯನ್ನು ಮಾಡುತ್ತಾರೆ ೫ ಜನರಿಗೆ ಪುರೋಹಿತರು ಕಂಕಣ ಕಟ್ಟಿದ ಮೇಲೆ ಮಲ್ಲಯ್ಯನಿಗೆ ಹೆಣ್ಣನ್ನು ನಿಶ್ಚಯಿಸಿದಂತೆ ಇದು ಮಲ್ಲೇಶ್ವರನ ಕಂಕಣ. ಮಲ್ಲೇಶ್ವರನ ಪರವಾಗಿ ಪುರೋಹಿತರು ಇದ್ದರೆ ಮಾಳಮ್ಮನ ಪರವಾಗಿ ಹೊಳಗುಂದದ ಭಕ್ತರಿರುತ್ತಾರೆ ಈ ಕಾರ್ಯಕ್ರಮ ಸಾಮಾನ್ಯ ಜನರು ಮಾಡುವ ನಿಶ್ಚಿತಾರ್ಥದಲ್ಲಿ ಯಾವರೀತಿಯ ಕಾರ್ಯಕ್ರಮಗಳು ನೆರವೇರಿಸುತ್ತಾರೆಯೋ ಅದೇ ರೀತಿ ಇರುತ್ತದೆ. ಕಾರ್ಯಕ್ರಮ ಮುಗಿಯುವ ಹೊತ್ತಿಗೆ ಸಮಯ ರಾತ್ರಿ ೯ ಗಂಟೆಯಾಗಿರುತ್ತದೆ.

**ಶಿವರಾತ್ರಿ**

ಪ್ರತಿವರ್ಷ ಶಿವರಾತ್ರಿಯಂದು ತುಂಗಭದ್ರಾ ನದಿಯ ನೀರು ತಂದು ೫ ವಿಶೇಷ ಪೂಜೆಗಳನ್ನು ಮಾಡುತ್ತಾರೆ. ಅಂದು ಮಲ್ಲಯ್ಯನಿಗೆ ಪೂಜೆಯನ್ನು ಮಾಡುವ ಎಲ್ಲಾ ಪುಜಾರಿಗಳು ಬಂದು ಈ ೫ ವಿಶೇಷ ಪೂಜೆಗಳನ್ನು ಮಾಡುತ್ತಾರೆ. ೫ ಪೂಜೆಗಳು ಒಂದೇತರನಾಗಿದ್ದು, ಮೊದಲ ಪುಜೆಯನ್ನು ಸಂಜೆ ೬ ಗಂಟೆ ಸಮಯಕ್ಕೆ ಪ್ರಾರಂಬಿಸುತ್ತಾರೆ. ಈ ಪೂಜೆಯನ್ನು ದೇವಸ್ಥಾದ ಎಲ್ಲಾ ಉಪ ದೇವಾಲಯಗಳಿಗು ಮಾಡುತ್ತಾರೆ. ಉಳಿದ ನಾಲ್ಕು ಪೂಜೆಗಳನ್ನು ಮಾತ್ರ ಮುಖ್ಯ ದೇವಸ್ಥಾನದಲ್ಲಿರುವ ಎಲ್ಲಾ ದೇವರಿಗೆ ಮಾಡುತ್ತಾರೆ. ಈ ಪೂಜೆಗಳು ದಿನನಿತ್ಯದ ಪೂಜೆಯಂತೆ ಇರುತ್ತದೆ. ಮೊದಲ ಪೂಜೆ ಮುಗಿದ ಮೇಲೆ ೨ ಅವಧಿಯ ನಂತರ ಮತ್ತೋಂದು ಪೂಜೆಯನ್ನು ಇದೇ ರೀತಿಯಲ್ಲಿ ನೆರವೇರಿಸುತ್ತಾರೆ. ಹೀಗೆ ೫ ಪೂಜೆಗಳಿದ್ದು ಭಕ್ತರೆಲ್ಲರೂ ನೆರೆದಿರುತ್ತಾರೆ.

**ಜಾತ್ರೆಯ ಉತ್ಸವ**

ಯಾವುದೇ ಒಂದು ಜನಾಂಗ ಮತ್ತು ಸಮುದಾಯ ಒಟ್ಟಿಗೆ ಒಂದು ಸ್ಥಳದಲ್ಲಿ ಸೇರಿ ಸಾರ್ವತ್ರಿಕವಾಗಿ ದೈವಾರಾಧನೆಯನ್ನು ಕೈಗೊಂಡು ಆ ದೇವರ ಹೆಸರಿನಲ್ಲಿ ಧಾರ್ಮಿಕ ಆಚರಣೆಗಳನ್ನು ಆಚರಿಸುವುದಾಗಿದೆ. ಆ ಮೂಲಕ ಆ ದೇವರ ಪ್ರಾಚೀನ ಪರಂಪರೆಯನ್ನು ಇಂದಿನ ಪೀಳಿಗೆಗೆ ವರ್ಗಾಯಿಸಿ ಅವರನ್ನು ಆ ದೇವರ ದೈವ ಭಕ್ತರನ್ನಾಗಿ ಮಾಡುವುದಾಗಿದೆ.

**ಜಾತ್ರೆಯ ಉದ್ದೇಶಗಳು**

- ದೇವರ ಸಾಮೂಹಿಕ ಆಚರಣೆ.
- ಜನಾಂಗಗಳಲ್ಲಿ ಸಾಂಸ್ಕೃತಿಕ ಒಗ್ಗಟ್ಟನ್ನು ತೋರಿಸುವುದು.
- ದೈವಾರಾಧನೆ ಮತ್ತು ಆ ದೈವದ ಆಚರಣೆಗಳನ್ನು ಮುಂದಿನ ಪೀಳಿಗೆಗೆ ವರ್ಗಾಯಿಸುವುದು.
- ಜೊತೆಗೆ ಸಾಮಾಜಿಕ ಮತ್ತು ರಾಜಕೀಯ ಬದ್ಧತೆಗಳನ್ನು ಸ್ಥಾಪಿಸಿ ಆ ಪ್ರದೇಶದ ಅಭಿವೃದ್ಧಿಯನ್ನು ಬಲಪಡಿಸುವುದು.

ಇಂತಹ ಹತ್ತಾರು ಜಾತ್ರೆಗಳು ಕರ್ನಾಟಕ ಸೇರಿದಂತೆ ಭಾರತದ ಎಲ್ಲಾ ರಾಜ್ಯಗಳಲ್ಲೂ ನಡೆಯುತ್ತವೆ. ಕರ್ನಾಟಕದಲ್ಲಿ ಶಿರಸಿ ಮಾರಮ್ಮನ ಜಾತ್ರೆ, ಸೌದತ್ತಿ ಎಲ್ಲಮ್ಮನ ಜಾತ್ರೆ, ಬಾದಾಮಿ ಬನಶಂಕರಿ ಜಾತ್ರೆ, ಮೊದಲಾದವುಗಳು ಪ್ರಮುಖ ಶಕ್ತಿ ದೇವತೆಯ ಜಾತ್ರಗಳಾಗಿವೆ. ಇನ್ನು ಉಳಿದಂತೆ, ಹಂಪಿ ವಿರೂಪಾಕ್ಷನ ಜಾತ್ರೆ, ಕುರುವತ್ತಿಯ ಬಸವಣ್ಣನ ಜಾತ್ರೆ, ಹಾಲುಮತ ಬೀರದೇವರ ಜಾತ್ರೆಗಳು ಮೊದಲಾದವು ನಡೆಯುತ್ತವೆ. ಈ ಎಲ್ಲಾ ಜಾತ್ರೆಗಳಿಗಿಂತ ಗಾತ್ರದಲ್ಲಿ ಮತ್ತು ವೈಶಿಷ್ಟ್ಯದಲ್ಲಿ ಮೈಲಾರನ ಜಾತ್ರೆಗಳು ದಕ್ಷಿಣದ ಇತಿಹಾಸದಲ್ಲಿಯೇ ಪ್ರಾಮುಖ್ಯತೆಯನ್ನು ಪಡೆದಿದೆ.

ಬಳ್ಳಾರಿ ಜಿಲ್ಲೆ ಹಿರೇಮೈಲಾರ ಕ್ಷೇತ್ರ, ಹಾವೇರಿ ಜಿಲ್ಲೆಯ ದೇವರಗುಡ್ಡ ಕ್ಷೇತ್ರ, ಕರ್ನೂಲ ಜಿಲ್ಲೆಯ ಮಿನಗೋಂದಿ ಮಲ್ಲಯ್ಯನ ಕ್ಷೇತ್ರಗಳಲ್ಲಿ ನಡೆಯುವ ಜಾತ್ರೆಯ ಉತ್ಸವಗಳಲ್ಲಿ ಅನೇಕ ರೀತಿಯ ಕಾರ್ಯಕ್ರಮಗಳು ನಡೆಯುತ್ತವೆ ಉದಾಹರಣೆ ಮೌನ ಸವಾರಿ, ವಿಜಯೋತ್ಸವ, ಮನೆ ಕಟ್ಟುವ ಆಚರಣೆ, ಕಂಕಣ, ದಸರ, ಶಸ್ತ್ರ ಪವಾಡ, ದೋಣಿತುಂಬುವುದು ಕಾರಣಿಕೋತ್ಸವ, ತೇರು ಎಳೆಯುವುದು, ತಾಂಬೂಲ ಸಮರ್ಪಣೆ, ಇವುಗಳಲ್ಲದೆ ಗುಗ್ಗರಿ ಹಬ್ಬ, ಭಂಡಾರ ಪೂಜೆ, ಕುದುರೆ ಹಬ್ಬ, ಖಡ್ಗ ಸಾರುವುದು ಮುಂತಾದ ಉತ್ಸವಗಳು ನಡೆಯುತ್ತವೆ. ಬಳ್ಳಾರಿ ಜಿಲ್ಲೆ ಮೈಲಾರದಲ್ಲಿ ನಡೆಯುವ ಮೈಲಾರನ ಜಾತ್ರೆಯನ್ನು ಕರ್ನಾಟಕದಲ್ಲಿ ನಡೆಯುವ ಬಹುದೊಡ್ಡ ಜಾತ್ರೆಯೆಂದು ಪರಿಗಣಿಸಬಹುದು. ಮೈಲಾರನ ಮತ್ತೊಂದು ಕ್ಷೇತ್ರವಾದ ಬಳ್ಳಾರಿ ಜಿ, ಸಿರುಗುಪ್ಪ ತಾ, ತೆಕ್ಕಲಕೋಟೆ ಮಲ್ಲಯ್ಯನ ಕ್ಷೇತ್ರದಲ್ಲಿ. ಮೇಲೆ ತಿಳಿಸಿದ ಕ್ಷೇತ್ರಗಳಲ್ಲಿ ನಡೆಯುವಷ್ಟು ಆಚಾರಣೆಗಳು ಇಲ್ಲಿ ನಡೆಯುವುದಿಲ್ಲವಾದರೂ ಕೆಲವೊಂದು ಆಚರಣೆಗಳು ಮಾತ್ರ ಇಲ್ಲಿ ನಡೆಯುವುದನ್ನು ಕಾಣುತ್ತೇವೆ.

ವೈಶಾಖ ಶುದ್ಧ ವಿಶಾಖ ನಕ್ಷತ್ರ ಅಗಿ ಹುಣ್ಣೀಮೆಯ ದಿನದಂದು ಜಾತ್ರೆ ನಡೆಯುತ್ತದೆ. ಜಾತ್ರೆ ಇನ್ನು ೯ ದಿನ ಇರುವಂತೆ ಮೊದಲ ದಿನ ರಾತ್ರಿ ಬ್ರಾಹ್ಮಣರನ್ನು ಕರೆಸಿ ಎಲ್ಲಾದೇವರಿಗೆ ಪೂಜೆ, ಅಭಿಶೇಕ, ಹೋಮಗಳನ್ನು ಮಾಡಿ ರಾತ್ರಿ ೯ ರ ಸಮಯಕ್ಕೆ ಮಲ್ಲಯ್ಯ, ಮಾಳಮ್ಮ, ದೇವಾಲಯದ ಉಪ ದೇವಾಲಯಗಳಿಗೆ ಮತ್ತು ಪೂಜಾರಿಗಳಿಗೆ ಕಂಕಣವನ್ನು ಕಟ್ಟುತ್ತಾರೆ. ಈ ಪೂಜೆಯನ್ನು ಮದುವೆಯ ಕಾರ್ಯಕ್ರಮವೆಂದು ಪರಿಗಣಿಸಿದ್ದಾರೆ.

### ಅನ್ನಬಲಿ

ಮರುದಿನದಿಂದ ಹುಣ್ಣಿಮೆಯ ದಿನದ ವರೆಗೆ ಪ್ರತಿದಿನ ಬೆಳಗ್ಗೆ ಮತ್ತು ಸಂಜೆ ೨ ಪೂಜೆಗಳಿದ್ದು ಪ್ರತಿ ದಿನ ಸಂಜೆ ಪ್ರತ್ಯೇಕವಾಗಿ ಅನ್ನವನ್ನು ಮಾಡಿ ಮಲ್ಲಯ್ಯ ಮಾಳಮ್ಮನನ್ನು ಕರೆದುಕೊಂಡು ಮೆರವಣೀಗೆ ಮಾಡಿಕೊಂಡು ದೇವಸ್ಥಾನದಿಂದ ತೇರುಬೀದಿಯಲ್ಲಿರುವ ಎದುರು ಬಸವಣ್ಣನವರೆಗೆ ೯ ದಿನ ಒಂದೊಂದು ಸ್ಥಳದಲ್ಲಿ ಅನ್ನಬಲಿಯನ್ನು ಹಾಕುತ್ತಾರೆ. ಈ ಒಂಬತ್ತು ದಿನಗಳಲ್ಲಿ ಯಾವುದೇ ರೀತಿಯ ಮದುವೆ ಮತ್ತು ಅಭಿಶೇಕದ ಕಾರ್ಯಕ್ರಮಗಳು ನಡೆಯುವುದಿಲ್ಲ. ಗರ್ಭಗೃಹದಲ್ಲಿ ಪೂಜಾರಿಗಳಿಗೆ ಬಿಟ್ಟರೆ ಮತ್ತಾರಿಗು ಪ್ರವೇಶವಿಲ್ಲ.

ಜಾತ್ರೆಯ ದಿನದಂದು ಮಲ್ಲಯ್ಯನಿಗೆ ಆಭರಣಗಳನ್ನು ಏರಿಸಿ ಎಲೆ ಪೂಜೆಯನ್ನು ಮಾಡಿದಮೇಲೆ ಜಾತ್ರೆ ಮುಗಿಯುವವರೆಗೆ ೫ ದಿನ ಯಾವುದೇ ರೀತಿ ಪೂಜೆ ಮಾಡುವುದಿಲ್ಲ. ಆ ದಿನದಂದು ಬೆಳಗ್ಗೆ ಹರಕೆ ಹೊತ್ತ ಭಕ್ತರು ದೀಡು ನಮಸ್ಕಾರ, ಮಂಡಿ ನಡಿಗೆ, ಮೊದಲಾದ ತಮ್ಮ ಹರಕೆಯನ್ನು ತೀರಿಸುತ್ತಾರೆ.

ಕರ್ನೂಲ್ ಜಿಲ್ಲೆ ಆಲೂರು ತಾಲೂಕಿನ ಹೊಳಗುಂದ ಗ್ರಾಮದ ನಾಯಕ ಜನಾಂಗದವರು ಗಂಗಿಮಾಳವ್ವನ ತವರು ಮನೆಯವರೆಂದು ಭಾವಿಸಿದ್ದು ಇವರನ್ನು ಕಾಂಚವೀರರೆಂದು ಕರೆಯಲಾಗಿದೆ. ನಾಳೆ ಹುಣ್ಣಿಮೆ ಎನ್ನುವಂತೆ ಅದರ ಹಿಂದಿನ ದಿನದ ರಾತ್ರಿ ಕಾಂಚವೀರರೆಲ್ಲ ಸೇರಿಕೊಂಡು ಸಭೆಯನ್ನು ನಡೆಸಿ ಪ್ರತಿಯೊಬ್ಬ ಭಕ್ತರ ಮನೆಗೆ ಹೋಗಿ ಕಾಣಿಕೆಯನ್ನು ಪಡೆದು ಅದರಿಂದ ಬಂಗಾರದಂತ ಭಂಡಾರದ ಸಂತೆಯನ್ನು ಮಾಡಿ ಅದನ್ನು ಬುತ್ತಿ ಮಾಡಿಕೊಂಡು ಪೂಜೆಮಾಡಿ ಒಂದೋತ್ತು (ಉಪವಾಸ) ಇರುತ್ತಾರೆ. ಅಗಿ ಹುಣ್ಣಿಮೆಯ ದಿನದಂದು ಮುಂಜಾನೆ ೧೧ರ ಸಮಯಕ್ಕೆ ಡೊಳ್ಳು, ಡಮಾನಗಳನ್ನು, ಕಟಾರಿಗಳನ್ನು, ಬಂಗಾರದಂತ ಬಂಡಾರವನ್ನು ಹೊತ್ತು ಕರಿ ಕಂಬಳಿಯಲ್ಲಿ ಬುತ್ತಿ ಮಾಡಿಕೊಂಡು ಪ್ರಯಾಣಿಸುತ್ತಾರೆ ದಾರಿ ಮಧ್ಯದಲ್ಲಿ ಹಗರಿ ನದಿಯಲ್ಲಿ ಗಂಗೆ ಪೂಜೆಯನ್ನು ಮಾಡಿಕೊಂಡು ಬರುತ್ತಾರೆ.

ಮಲ್ಲಯ್ಯನ ಕ್ಷೇತ್ರಕ್ಕೆ ಬಂದನಂತರ ಹೊಳಗುಂದದ ಭಕ್ತರಿಂದ ಮಲ್ಲಯ್ಯನಿಗೆ ಕುಂಬಸೇವೆಯನ್ನು ಸಲ್ಲಿಸುತ್ತಾರೆ. ನಂತರ ಕಾಂಚವೀರರು ಜರಕಿ ಚಪ್ಪಲಿಯನ್ನು ಧರಿಸಿಕೊಂಡು ಗರ್ಭಗೃಹಕ್ಕೆ ಪ್ರವೇಶಿಸಿ ಗಲಾಟೆಯನ್ನು ಮಾಡಿ ತಮ್ಮ ಮನೆ ದೇವರಾದ ತ್ರಿಶೂಲಧಾರಿ ಕೊಂತಮಯ್ಯನನ್ನು ತೆಗೆದುಕೊಂಡು ಹೊಗಿ ದೇವಸ್ಥಾನದ ಪಕ್ಕದಲ್ಲಿರುವ ಹೊಂಡದಲ್ಲಿ ತ್ರಿಶೂಲಕ್ಕೆ ಸ್ನಾನವನ್ನು ಮಾಡಿಸಿ ಒಡವೆಗಳನ್ನು ಏರಿಸಿ ಪೂಜೆಯನ್ನು ಮಾಡುತ್ತಾರೆ. ಆ ದಿನ ತ್ರಿಶೂಲಕ್ಕೆ ಅಪಾರವಾದ ದೈವಶಕ್ತಿ ಬರುತ್ತದೆ.

ತ್ರಿಶೂಲಧಾರಿ ಕೊಂತಮಯ್ಯನನ್ನು ತೆಗೆದುಕೊಂಡು ಊರ ಹೊರಗಡೆ ಹೊಲದಲ್ಲಿ ಇರುವ ಗಂಗಿಮಾಳಮ್ಮನಲ್ಲಿಗೆ ಹೋಗಿ ಪೂಜೆಯನ್ನು ಮಾಡಿಕೊಂಡು ಬರುವ ಹೊತ್ತಿಗೆ ಸಮಯ ಸಂಜೆ ೫ ಗಂಟೆಯಾಗಿರುತ್ತದೆ. ಅಷ್ಟೊತ್ತಿಗಾಗಲೆ ರಥವನ್ನು ಅಲಂಕರಿಸಿ ಸಿದ್ಧಮಾಡಿರುತ್ತಾರೆ. ಸುತ್ತಲೂ ಪಸಲಿನಿಂದ ಕೂಡಿದ ಗಡಿಗೆಗಳನ್ನು ಇಡುತ್ತಾರೆ. ಜಾತ್ರೆ ೧೫ ದಿನ ಇರುವುದಕ್ಕು ಮುಂಚಿತವಾಗಿ ಈ ಗಡಿಗೆಗಳಲ್ಲಿ ತುಂಗಭದ್ರಾ ನದಿಯ ಮಣ್ಣನ್ನು ತಂದು ಗಡಿಗೆಗಳಲ್ಲಿ ತುಂಬಿ ಅದರಲ್ಲಿ ಧಾನ್ಯಗಳನ್ನು (ಜೋಳ, ಭತ್ತ, ರಾಗಿ, ಸಜ್ಜೆ,ನವಣೆ ಮುಂತಾದ) ಹಾಕುತ್ತಾರೆ. ತೇರಿನ ಸುತ್ತ ಇಟ್ಟಿರುವ ಮಡಿಕೆಗಳಲ್ಲಿ ಯಾವ ಮಡಿಕೆಯಲ್ಲಿ ಯಾವ ಫಸಲು ಚೆನ್ನಾಗಿ ಬೆಳೆದಿರುತ್ತದೆಯೋ ಆ ಮಡಿಕೆ ಇರುವ ದಿಕ್ಕಿಗೆ ಮಳೆ, ಬೆಳೆ ಚೆನ್ನಾಗಿ ಆಗುತ್ತದೆ ಎನ್ನುವುದು ಅಲ್ಲಿನ ಸ್ಥಳೀಯರ ನಂಬಿಕೆ.

ಮಾಳಮ್ಮನಿಗೆ ಹೋದಂತ ಭಕ್ತರು ಮರಳಿ ಮಲ್ಲಯ್ಯನ ಸ್ಥಳಕ್ಕೆ ಬಂದು ೬ ಗಂಟೆಗೆ ಮಲ್ಲಯ್ಯ, ಮಾಳಮ್ಮನನ್ನು ರಥದಲ್ಲಿ ಕೂಡಿಸಿ ತ್ರಿಶೂಲಧಾರಿ ಕೊಂತಮಯ್ಯನನ್ನು ಹೊತ್ತ ಕಾಂಚವೀರನು ತೇರಿನ ಸುತ್ತಲೂ ೩ ಸುತ್ತು ತಿರುಗಿ 'ಮುಂದಕ್ಕೆ ಬಾ ಬಾ ಎಂದು ಕರೆದರೆ, ಮಲ್ಲಯ್ಯ ಬಿಟ್ಟೆ ಇಡ್ಕೋಳಿ' ಎನ್ನುವಂತೆ ರಥವನ್ನು ಮುಂದಕ್ಕೆ ಎಳೆಯುತ್ತಾರೆ. ಈ ಉತ್ಸವಕ್ಕೆ ಸುತ್ತಮುತ್ತಲಿನ ಕ್ಷೇತ್ರಗಳಿಂದ ಹತ್ತಾರು ಸಾವಿರ ಭಕ್ತರು ಬಂದು ನೆರೆದಿರುತ್ತಾರೆ. ರಥೋತ್ಸವ ಮುಗಿದಮೇಲೆ ಯಾವುದೇ ರೀತಿ ಕಾರ್ಯಕ್ರಮ ಇರುವುದಿಲ್ಲ.

**ಶಸ್ತ್ರ ಪವಾಡ**

ಮರುದಿನ ಮುಂಜಾನೆ ೧೦ ಗಂಟೆಯಿಂದ ಶಸ್ತ್ರ ಪವಾಡ ಕಾರ್ಯಕ್ರಮ ಪ್ರಾರಂಭವಾಗಿ, ಹೊಳಗುಂದ ಮತ್ತು ಇತರೆ ಕ್ಷೇತ್ರಗಳಿಂದ ಬಂದ ಭಕ್ತರಿಂದ ಶಸ್ತ್ರ ಪವಾಡ ನಡೆಯುತ್ತದೆ. ಕನ್ನೆಪವಾಡ, ಸರಪಳಿ ಪವಾಡ, ಬಗಣಿಗೂಟ, ಕೈಪವಾಡ, ಸರಪಳಿ ಪವಾಡ, ಶಿರಸ್ಸು ಪವಾಡ, ಮೊದಲಾದ ಪವಾಡಗಳು ಮೈಲಾರನ ಹಿರೇ ಹಡಗಲಿ, ಎಳ್ಳರ್ತಿ, ದೇವರಗುಡ್ಡ, ಮೊದಲಾದ ಕ್ಷೇತ್ರಗಳಲ್ಲಿ ಉತ್ಸವಗಳ ಸಂದರ್ಭದಲ್ಲಿ ಇಂದಿಗೂ ಆಚರಣೆಯಲ್ಲಿವೆ. ಆದರೆ ತೆಕ್ಕಲಕೋಟೆ ಮಲ್ಲಯ್ಯನ ಕ್ಷೇತ್ರದಲ್ಲಿ ಪ್ರಾಚೀನದಲ್ಲಿ ಈ ಪವಾಡಗಳು ಆಚರಣೆಯಲ್ಲಿದ್ದದ್ದು ಕಂಡುಬಂದಿದೆಯಾದರು ಇತ್ತೀಚಿನ ದಿನದಲ್ಲಿ ಇವುಗಳನ್ನು ನಿಷೇಧಿಸಲಾಗಿದ್ದು ಕೆಲವೊಂದು ಪವಾಡಗಳನ್ನು ಮಾತ್ರ ನಡೆಯುವುದು ಕಂಡುಬರುತ್ತದೆ. ಶಸ್ತ್ರ ಪವಾಡಗಳನ್ನು ಮಾಡುವ ಭಕ್ತರು ಪವಾಡ ಮಾಡುವ ಮೊದಲು ೩ ದಿವಸ ಉಪವಾಸವನ್ನು ಇರುತ್ತಾರೆ.

**೧. ಸರಳು ಪವಾಡ**

ಭಕ್ತರು ಪವಾಡ ಮಾಡುವಾಗ ಕಬ್ಬಿಣದ ಸರಳುಗಳನ್ನು ಬಳಸುತ್ತಾರೆ. ವ್ಯಕ್ತಿಯು ಕಚ್ಚೆಯನ್ನು ಬಿಟ್ಟರೆ ಮತ್ತಾವ ವಸ್ತ್ರವನ್ನು ಧರಿಸಿರುವುದಿಲ್ಲ. ಪವಾಡಮಾಡುವ ಮೊದಲು ದೇವರಿಗೆ ನಮಸ್ಕರಿಸಿ ೯ ಕಬ್ಬಿಣದ ಸರಳುಗಳನ್ನು ದೇಹದ ೯ ಭಾಗದಲ್ಲಿ ಚುಚ್ಚಿಕೊಳ್ಳುತ್ತಾರೆ. (ನಾಲಿಗೆ, ಕೈ, ಕಾಲು, ತೋಳು ಮೊದಲಾದ ಭಾಗ) ಶಸ್ತ್ರವನ್ನು ಚುಚ್ಚಿಕೊಂಡಾಗ ಹೆಚ್ಚು ರಕ್ತ ಸ್ರಾವ ಆಗುವುದಿಲ್ಲ.

೨. ಬಾಯಿ ಬೀಗ

ಇವರು ಸಹ ಶಸ್ತ್ರವನ್ನು ಹಾಕುವ ಮೊದಲು ಮಲ್ಲಯ್ಯನಿಗೆ ನಮಸ್ಕರಿಸಿ ಕತ್ತಿಯೊಂದನ್ನು ಕೈಯಲ್ಲಿ ಹಿಡಿದು ಬಾಯಿಗೆ ಅಡ್ಡಲಾಗಿ ಚುಚ್ಚಿಕೊಳ್ಳುತ್ತಾರೆ. ಇದಕ್ಕೆ ಬಾಯಿ ಬೀಗ ಎಂದು ಕರೆಯುತ್ತಾರೆ.

೩. ಭಕ್ತರು ಬ್ಲೇಡಿನಿಂದ ಎದೆಗೆ ಮತ್ತು ಬುಜಕ್ಕೆ ಒಡೆದುಕೊಳ್ಳುವ ಪವಾಡವನ್ನು ಸಹ ಮಾಡುತ್ತಾರೆ.

೪. ಮದರಂಗಿಮಂಟಪ (ಮಹಾಮಂಟಪ) ದ ಮಧ್ಯ ಭಾಗದಲ್ಲಿ ಮಲ್ಲಯ್ಯನಿಗೆ ಅಭಿಮುಖವಾಗಿ ದೊಡ್ಡ ಕತ್ತಿಯನ್ನು ಹಿಡಿದು ಒಬ್ಬೊಬ್ಬರಾಗಿ ಕುಣಿಯತ್ತಾರೆ.

ಈ ರೀತಿಯಲ್ಲಿ ಭಕ್ತರು ಶಸ್ತ್ರ ಪವಾಡಗಳನ್ನು ಧರಿಸುತ್ತಾರೆ. ಈ ಕಾರ್ಯಕ್ರಮವು ೧೨ ಗಂಟೆಯವರೆಗೆ ನಡೆಯುತ್ತದೆ.

ಈ ಕಾರ್ಯಕ್ರಮ ಮುಗಿದ ನಂತರ ಭಕ್ತರೆಲ್ಲರೂ ಹೂ, ಹಣ್ಣು, ಕಾಯಿ, ಕರ್ಪೂರವನ್ನು ಮಲ್ಲಯ್ಯನಿಗೆ ಅರ್ಪಿಸಿ ಕಾಯಿಯನ್ನು ಹೊಡೆದುಕೊಂಡು ಬರುತ್ತಾರೆ. ಈ ಸಮಯದಲ್ಲಿ ದೇವಸ್ಥಾನದಲ್ಲಿ ಜನರ ಹೋಡಾಟ ಚುರುಕಾಗಿರುತ್ತದೆ. ಆ ದಿನ ರಾತ್ರಿ ಕುದುರೆಯ ಮೇಲೆ ಮಲ್ಲಯ್ಯನನ್ನು ಕೂರಿಸಿಕೊಂಡು ಹೊಲದಲ್ಲಿರುವ ಗಂಗಿಮಾಳಮ್ಮನ ದೇವಸ್ಥಾನಕ್ಕೆ ಕರೆದುಕೊಂಡು ಹೊಗುತ್ತಾರೆ. ಮಾಳಮ್ಮನಿಗೆ ಪೂಜೆ ಮಾಡಿಕೊಂಡು ಮರಳಿ ಗಿರಿಗೆ ಬಂದು ಜಾತ್ರೆಯಲ್ಲಿ ೫ ಬಾರಿ ಸುತ್ತಾಡಿ ದೇವಸ್ಥಾನದ ಒಳಗಡೆ ಕರೆದೊಯ್ಯುತ್ತಾರೆ. ಈ ಸಮಯಕ್ಕಾಗಲೆ ಮಧ್ಯ ರಾತ್ರಿ ಆಗಿರುತ್ತದೆ.

ಜಾತ್ರೆಯ ೩ನೇ ದಿನ ಮುಂಜಾನೆ ಗೊರವಯ್ಯನವರು ಮಲ್ಲಯ್ಯನ ಪವಾಡಗಳ ಕುರಿತು ಹಾಡುಗಳನ್ನು ಹಾಡುವುದರ ಮೂಲಕ ಹೊಗಳುತ್ತಾರೆ. ಇದಾದನಂತರ ಮಧ್ಯಾಹ್ನ ಯಾವುದೇ ಆಚರಣೆಗಳು ಇರುವುದಿಲ್ಲ ಆ ದಿನ ರಾತ್ರಿ ಹೊಳಗುಂದ ಭಕ್ತರು ಡೊಳ್ಳು, ಡಮಾನಗಳನ್ನು ತೆಗೆದುಕೊಂಡು ತಮ್ಮ ಮನೆಯ ದೇವರಾದ ತ್ರಿಶೂಲಧಾರಿ ಕೊಂತಮಯ್ಯನನ್ನು ತಲೆಯ ಮೇಲೆ ಹೊತ್ತು ದೇವಾಲಯದ ಸುತ್ತ ೫ ಸುತ್ತು ಕುಣಿದು ದೇವಸ್ಥಾನದ ಒಳಗಡೆ ಹೋಗಿ ಮೊದಲು ಇದ್ದ ಸ್ಥಳದಲ್ಲಿ ಇಡುತ್ತಾರೆ ಆ ಹೊತ್ತಿಗಾಗಲೆ ಸಮಯ ೧೧ ಗಂಟೆಯಾಗಿರುತ್ತದೆ.

ಮರುದಿವಸ ಮುಂಜಾನೆ ಹೊಳಗುಂದ ಗ್ರಾಮಸ್ಥರು ತಮ್ಮ ಸ್ಥಳಕ್ಕೆ ತೆರಳುತ್ತಾ ಆ ದಿನ ಸಂಜೆ ಅಲ್ಲಿಂದ ತಂದ ಪ್ರಸಾದದ ಭಂಡಾರವನ್ನು ಭಕ್ತಾದಿಗಳಿಗೆಲ್ಲ ಹಂಚುತ್ತಾರೆ. ೫ನೇ ದಿನ ದೇವಸ್ಥಾನವನ್ನು ತೊಳೆದು ಎಲೆ ಪೂಜೆಯನ್ನು ಇಳಿಸಿ ಮಲ್ಲಯ್ಯನಿಗೆ ಪೂಜೆ ಮಾಡುತ್ತಾರೆ. ಆ ದಿನ ಸಂಜೆ ಮಲ್ಲಯ್ಯ ಮತ್ತು ಮಾಳಮ್ಮ ತೆಕ್ಕಲಕೋಟೆಯ ಊರೊಳಗೆ ಹೋಗಿಬರುತ್ತಾರೆ. ಆ ನಂತರ ಎಂದಿನಂತೆ ಪೂಜೆ ಮುಂದುವರಿಯುತ್ತದೆ.

## ಜೀವನಾವರ್ತನದ ಆಚರಣೆಗಳು

### ನಾಮಕರಣ

ನಾಮಕರಣವನ್ನು ತೊಟ್ಟಿಲು ಇಡುವ ಕಾರ್ಯಕ್ರಮ ಎಂದು ಕರೆಯುತ್ತಾರೆ. ಬಹುತೇಕ ಎಲ್ಲಾ ಜನಾಂಗದಲ್ಲಿ ಮಗು ಜನನವಾದ ವರ್ಷದ ಒಳಗೆ ಜೋಯಿಸರು ತಿಳಿಸಿದಂತೆ ನಾಮಕರಣಕ್ಕೆ ಒಂದು ದಿನವನ್ನು ನಿಗಧಿ ಪಡಿಸುತ್ತಾರೆ ಈ ಕಾರ್ಯಕ್ರಮಕ್ಕೆ ತಮ್ಮ ಬಂಧು ಮಿತ್ರರರನ್ನು ಜೊತೆಗೆ ನೆರೆಹೊರೆಯವರನ್ನು ಕರೆಯುವುದು ವಾಡಿಕೆ. ಕೆಲವು ಭಕ್ತರು ಮಲ್ಲಯ್ಯನ ಕ್ಷೇತ್ರದಲ್ಲಿ ನಾಮಕರಣದ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಾರೆ ಗಂಡುಮಗುವಾದ ರೆಮಲ್ಲಯ್ಯ, ಹೆಣ್ಣಾದರೆ ಮಾಳಮ್ಮ ಎಂದು ಕರೆದು ವ್ಯಾವಹಾರಿಕ ನಾಮವಾಗಿ ಕೆಲವರು ಬದಲಿ ಹೆಸರುಗಳನ್ನು ಇಡುತ್ತಾರೆ. ಕಾರ್ಯಕ್ರಮದಲ್ಲಿ ಸೋದರ ಮಾವ ಅಥವಾ ಅತ್ತೆ ಮಗುವಿನ ಕಿವಿಯಲ್ಲಿ ೩ ಬಾರಿ ಹೆಸರನ್ನು ಕೂಗುತ್ತ ಮನೆಯಿಂದ ಹೊರಗಡೆ ಓಡಿ ಬರುತ್ತಾರೆ. ಕಾರಣ ಹೊರಗಡೆ ಬರುವಾಗ ಆತನ ಸಂಬಂಧಿಕರು ಬೆನ್ನಿಗೆ ಗುದ್ದಲು ಸಿದ್ಧತೆಯಲ್ಲಿರುರುತ್ತಾರೆ. ಈ ಸಮಯದಲ್ಲಿ ನಾಲ್ಕೈದು ಜನ ಅಜ್ಜಿಯರು ಸೇರಿ ಹಾಡುಗಳನ್ನು ಹಾಡುತ್ತಾರೆ. ಕಾರ್ಯಕ್ರಮ ಮುಗಿದ ನಂತರ ಮನೆಯವರಿಂದ ಸಿಹಿ ಊಟದ ವ್ಯವಸ್ಥೆಯಿರುತ್ತದೆ. ಕೆಲ ಜನಾಂಗದವರಲ್ಲಿ ನಾಮಕರಣದ ಪದ್ದತಿ ಇರದೆ ಮಲ್ಲಯ್ಯನ ವಾರದಂದು ಮಲ್ಲಯ್ಯನ ನಾಮವನ್ನು ಮಗುವಿಗೆ ಇಟ್ಟು ಸುಮ್ಮನಾಗುತ್ತಾರೆ.

### ಜವಳ

ಜನಿಸಿದ ಮಕ್ಕಳಿಗೆ ತಲೆಯ ಕೂದಲು ತೆಗೆಸುವುದಕ್ಕೆ ಜವಳ ಎನ್ನವರು. ಹುಟ್ಟಿದ ಮಕ್ಕಳಿಗೆ ಒಂದು ವರ್ಷದ ಒಳಗೆ ಇಲ್ಲವೆ ೩ ವರ್ಷದಲ್ಲಿ ತಲೆ ಕೂದಲನ್ನು (ಹುಟ್ಟು ಕೂದಲು) ತಗೆಸಲು ಜೋಯಿಸರು ತಿಳಿಸಿದಂತೆ ಒಂದು ದಿನವನ್ನು ನಿಗಧಿ ಪಡಿಸುತ್ತಾರೆ ಈ ಕಾರ್ಯಕ್ರಮಕ್ಕೆ ತಮ್ಮ ಬಂಧು ಮಿತ್ರರರನ್ನು ಜೊತೆಗೆ ನೆರೆಹೊರೆಯವರನ್ನು ಕರೆಯುವುದು ವಾಡಿಕೆ. ಕೆಲವರು ಮಲ್ಲಯ್ಯನ ಕ್ಷೇತ್ರದಲ್ಲಿ ಈ ಕಾರ್ಯಕ್ರಮ ಮಾಡುತ್ತಾರೆ. ಇನ್ನು ಕೆಲವರು ಮನೆಯಲ್ಲಿಯೇ ಮಾಡುತ್ತಾರೆ. ಮಕ್ಕಳಿಗೆ ಕೂದಲು ತೆಗೆಸಿದ ನಂತರ ಬಂದಂತ ಸಂಬಂಧಿಕರು, ನೆರೆಹೊರೆಯವರು ತಾಯಿಗೆ ಮತ್ತು ಮ್ಕಳಿಗೆ ಕಾಣಿಕೆಯನ್ನು ನೀಡುತ್ತಾರೆ. ಕಾರ್ಯಕ್ರಮ ಮುಗಿದ ನಂತರ ಮನೆಯವರಿಂದ ಸಿಹಿ ಊಟದ ವ್ಯವಸ್ಥೆಯಿರುತ್ತದೆ.

### ಮದುವೆ ಕಾರ್ಯಕ್ರಮ

ಮದುವೆ ಅನ್ನುವುದು ಪ್ರತಿಯೊಬ್ಬರ ಬದುಕಿನಲ್ಲಿ ಒಂದು ಮಹತ್ತರವಾದ ಘಟ್ಟ. ಬ್ರಹ್ಮಚರ್ಯದಿಂದ ಗೃಹಸ್ತಾಶ್ರಮಕ್ಕೆ ಕಾಲಿರಿಸುವ ಒಂದು ಸಂಕ್ರಮಣಕಾಲ ಅದು ಬ್ರಹ್ಮಚಾರಿಯಾಗಿದ್ದ ಒಬ್ಬ ಯುವಕ ಅಥವಾ ಯುವತಿ 'ಮದುವೆ' ಅನ್ನೊ ಮೂರಕ್ಷರದ ಬಂಧನದಲ್ಲಿ ಎಲ್ಲೋ ಹುಟ್ಟಿದ ಗಂಡಿಗೆ ಎಲ್ಲೋ ಹುಟ್ಟಿದ ಹೆಣ್ಣಿಗೆ 'ಮದುವೆ' ಅನ್ನುವ ಹಂದರದಲ್ಲಿ ಒಬ್ಬರಿಗೊಬ್ಬರು ದಂಪತಿಗಳಾಗಿ ತಮ್ಮ ಜೀವನವನ್ನು ಸಾಗಿಸುತ್ತಾರೆ. ಮಲ್ಲಯ್ಯದೇವರು ಬಹುತೇಕ ಎಲ್ಲಾ ಜನಾಂಗದವರ ಮನೆ ದೇವರಾಗಿರುವುದರಿಂದ ಮದುವೆಯ ಶುಭಕಾರ್ಯದಲ್ಲಿ ಎಲ್ಲಾ ಜನಾಂಗದವರು ಮದುವೆಯ ಮುಂಚೆ ಮದುಮಗ ಜೊತೆಗೆ ಮತ್ತಿತರರು ದೇವಸ್ಥಾನಕ್ಕೆ ಬಂದು ಮಲ್ಲಯ್ಯನಿಗೆ ಬಟ್ಟೆಯನ್ನು ವರಿಸುತ್ತಾರೆ. ಜೊತೆಗೆ ಧಾನ್ಯಗಳು, ಕೊಬ್ಬರಿ, ಬೆಲ್ಲ, ತುಪ್ಪ ಮುಂತಾದವನ್ನು ಅರ್ಪಿಸಿ ಕಾಯಿ ಹೊಡೆಸಿಕೊಂಡು

ಲಗ್ನಪತ್ರಿಕೆಯನ್ನು ನೀಡಿ ಮದುವೆ ಕಾರ್ಯಕ್ರಮಕ್ಕೆ ಶುಭ ಆಶಿರ್ವಾದ ಪಡೆದುಕೊಂಡು ಬರುತ್ತಾರೆ. ಹೆಣ್ಣಿನ ಕಡೆಯವರು ಸಹ ಇದೇ ತರ ಆಶಿರ್ವಾದ ಪಡೆದುಕೊಳ್ಳುತ್ತಾರೆ. ಇದು ಪ್ರತಿಯೊಂದು ಜನಾಂಗದವರಲ್ಲಿ ತಪ್ಪದೇ ನಡೆಯುವ ಆಚರಣೆ. ಕೆಲವು ಜನರು ಮದುವೆ ಕಾರ್ಯಕ್ರಮವನ್ನು ಮಲ್ಲಯ್ಯನ ಸ್ಥಾನದಲ್ಲಿ ನಡೆಸಿಕೊಳ್ಳುತ್ತಾರೆ. ಇನ್ನು ಕೆಲವರು ಮನೆಯಲ್ಲಿ ನಡೆಸುತ್ತಾರೆ. ಅಲ್ಲದೆ ಮಲ್ಲಯ್ಯನ ಕ್ಷೇತ್ರದಲ್ಲಿ ಇತ್ತೀಚೆಗೆ ೩ ವರ್ಷಗಳಿಂದ ಸಾಮೂಹಿಕ ವಿವಾಹ ಕಾರ್ಯಕ್ರಮಗಳು ನಡೆಯುತ್ತಿವೆ. ದೇವಸ್ಥಾನದಲ್ಲಿ ಮದುವೆ ಕಾರ್ಯಕ್ರಮವನ್ನು ಮದರಂಗಿ ಮಂಟಪದ ನಾಲ್ಕು ಕಂಬಗಳ ಮಧ್ಯದಲ್ಲಿ ನಡೆಸುತ್ತಾರೆ.

ಈ ರಿತಿಯಾಗಿ ಮಲ್ಲಯ್ಯನಿಗೆ ವಾರ್ಷಿಕೋತ್ಸವ ಮತ್ತು ಜಿವನಾಧಾರಿತ ಉತ್ಸವಗಳು ನಡೆಯುತ್ತವೆ. ಒಟ್ಟಾರೆಯಾಗಿ ಈ ಉತ್ಸವಗಳಿಂದ ಸಂಸ್ಕೃತಿ, ಸಂಪ್ರದಾಯಗಳು, ಆಚರಣೆಗಳು ತಲ ತಲಾಂತರದಿಂದ ಜನಪದರಲ್ಲಿ ಉಳಿದುಕೊಂಡು ಬಂದಿರುವುದು ಭಾಸವಾಗುತ್ತದೆ. ಮಲ್ಲಯ್ಯನ ಉತ್ಸವಗಳಲ್ಲಿ ಮಾಡುವ ಆಚರಣೆಗಳು ಸಂಪ್ರದಾಯಗಳು ಯಾವ ದೇವರ ಉತ್ಸವಗಳಲ್ಲಿಯೂ ಕಂಡುಬಂರುವುದಿಲ್ಲ.

# ಅಧ್ಯಾಯ-೬
## ಉಪಸಂಹಾರ

ನಮ್ಮ ಸಂಸ್ಕೃತಿಯಲ್ಲಿ ಹಾಸು ಹೊಕ್ಕಾಗಿರುವ ದೈವದ ಕಲ್ಪನೆ ಭಾರತದ ವೈಶಿಷ್ಟ್ಯ ವೆನ್ನಬಹುದು ಇಲ್ಲಿ ಜಾತಿ ಜನಾಂಗದವರಿಗೂ ಅವರದೇ ಆದ ದೈವದ ಪರಿಕಲ್ಪನೆಗಳಿವೆ. ಸಹಸ್ರಾರು ವರ್ಷಗಳ ಇತಿಹಾಸದಲ್ಲಿ ಹಲವಾರು ಜನಾಂಗಗಳ, ಸಂಸ್ಕೃತಿಗಳ, ಧಾರ್ಮಿಕ ಪಂಥಗಳ ಉಗಮಕ್ಕೆ ಕಾರಣವಾದ ಅಂಶಗಳಿವೆ, ಅದೇ ರೀತಿ ವರ್ಗ ಸಂಘರ್ಷ ಹಾಗೂ ನಾಶಕ್ಕೂ ಕಾರಣವಾದ ಅಂಶಗಳಿವೆ. ಈ ರೀತಿಯ ಸಂಘರ್ಷ ಹಾಗೂ ನಾಶಗಳ ಪ್ರಕ್ರಿಯೆಯಲ್ಲಿ ಹೊಸ ಮಾರ್ಗವೊಂದು ಹುಟ್ಟುತ್ತಾ ಹೊಗುತ್ತದೆ ಸಮಾಜವು ಸಹ ಈ ರೀತಿಯ ಹೊಸ ಪರಂಪರೆಗೆ ಒಗ್ಗಿಕೊಳ್ಳತ್ತಾ ಹೊಗುತ್ತದೆ. ಅದೇ ರೀತಿ ಪ್ರಭುತ್ವದಲ್ಲಿ ಆಗುವ ಬದಲಾವಣೆಗಳು, ವಲಸೆ ಹೊಗುವಿಕೆ ಮೊದಲಾದ ಕಾರಣಗಳಿಂದ ಉಂಟಾಗುವ ಹಳೆಯ ಸಂಪ್ರದಾಯದ ಪತನ ಹಾಗೂ ಹೊಸ ಸಂಪ್ರದಾಯಗಳ ಉಗಮಗಳಲ್ಲಿ ೨ ಸಂಪ್ರದಾಯಗಳ ಅಂಶಗಳು ಪಳಿಯುಳಿಕೆಯಂತೆ ಉಳಿದುಬಿಡುತ್ತವೆ. ಹೀಗೆ ಭಾರತೀಯ ಸಂಸ್ಕೃತಿಯಲ್ಲಿ ಅನೇಕ ಹೊಸ ಸಂಪ್ರದಾಯಗಳು ಹಳೆಯ ಬೇರಿನಿಂದ ಬೆಳೆಯುವ ಹೊಸ ಚಿಗುರಿನಂತೆ ಬೆಳೆಯುತ್ತಾ ಬಂದಿದೆ. ಇದೇ ರೀತಿಯಲ್ಲಿ ಬೆಳೆದು ಬಂದ ಸಂಸ್ಕೃತಿಯ ಭಾಗವಾಗಿರುವ ಮೈಲಾರಲಿಂಗನ ಸಂಪ್ರದಾಯ ಬಹು ಪ್ರಮುಖವಾದುದಾಗಿದೆ. ಮೈಲಾರನ ಸಂಪ್ರದಾಯ ಕರ್ನಾಟಕ ಆಂಧ್ರಪ್ರದೇಶ, ಮಹಾರಾಷ್ಟ್ರ, ಮುಂತಾದ ಕಡೆ ಹರಡಿರುವುದನ್ನು ಸಹ ಕಾಣಬಹುದು.

ಶ್ರೀ ಮಾಳಸಾ ಮಲ್ಲೇಶ್ವರ ಸ್ವಾಮಿ ತೆಕ್ಕಲಕೋಟೆ ಕ್ಷೇತ್ರದಲ್ಲಿ ನೆಲೆಸಿದ್ದು ಗಣಾಪತ್ಯರಿಗೆ ಗಣೇಶನಂತೆ, ವೈಷ್ಣವರಿಗೆ ಕೂರ್ಮರೂಪದ ವಿಷ್ಣುವಿನಂತೆ ಕಾರ್ತಿಕೇಯ ಭಕ್ತರಿಗೆ ಅಲ್ಲಿ ವಿಶೇಷವಾಗಿರುವ ನವಿಲುಗಳ ದರ್ಶನದಂತೆ, ಸೂರ್ಯೋಪಾಸಕರಿಗೆ ಸೂರ್ಯ ಬಿಂಬದಂತೆ ದರ್ಶನ ಕೊಡುತ್ತಾನೆ. ಇಂತಹ ಮಲ್ಲೇಶ್ವರ ಅಥವಾ ಮಲ್ಲಯ್ಯನನ್ನು ಸಕಲ ಪಂಗಡಗಳ ಭಕ್ತರು ಪೂಜಿಸಿ ತಮ್ಮ ಇಷ್ಟಾರ್ಥಗಳನ್ನು ಸಿದ್ಧಿಸಿಕೊಂಡಿದ್ದಾರೆ. ಈ ಹಿನ್ನಲೆಯಲ್ಲಿ ಸ್ವಾಮಿ ಮಲ್ಲಯ್ಯನೊಂದಿಗೆ ಭಕ್ತರು ತಾವು ಇಟ್ಟಿರುವ ಭಕ್ತಿಯ ಸ್ವರೂಪ, ಆಚರಣೆಯ ವಿಧಿ ವಿಧಾನ ಜೀವನ ಸ್ಥಾನಿಕರುಗಳ ಒಡೆತನ ಮುಂತಾದವುಗಳನ್ನೆಲ್ಲ "ತೆಕ್ಕಲಕೋಟೆ ಮಲ್ಲಯ್ಯ : ಇತಿಹಾಸ ಮತ್ತು ಪುರಾತತ್ವ ಅಧ್ಯಯನ" ದ ಅಡಿಯಲ್ಲಿ ಸಕಾರಗೊಳಿಸಲಾಗಿದೆ.

ತೆಕ್ಕಲಕೋಟೆ ಪ್ರದೇಶದಲ್ಲಿ ಪ್ರಾಗಿತಿಹಾಸದಿಂದ ಬ್ರಿಟೀಷರ ಕಾಲದವರೆಗಿನ ಸುದೀರ್ಘವಾದ ಸಾಂಸ್ಕೃತಿಕ ಘಟ್ಟಗಳನ್ನು ಅಧ್ಯಯನ ಮಾಡಲಾಗಿದೆ. ಅದು ಮಾನವನು ಅಲೆಮಾರಿ ಜೀವನದಿಂದ ಹಿಡಿದು ಕ್ರಮೇಣ ಒಂದು ಸುಸಂಬದ್ಧವಾದ ಸಾಮಾಜಿಕ ವ್ಯವಸ್ಥೆ ನಿರ್ಮಾಣವಾಗುವಲ್ಲಿ ಅನೇಕ ಕ್ರಾಂತಿಕಾರಿ ಬದಲಾವಣೆಗಳಾಗಿರುವುದನ್ನು ಕಾಣುತ್ತೇವೆ. ಭೌಗೋಳಿಕವಾಗಿ ಸಮೃದ್ಧಿಯನ್ನು ಪಡೆದಿರುವ ಇಲ್ಲಿಯ ಬೆಟ್ಟ, ಗುಡ್ಡ, ಕಾಡು, ನೀರು, ಮೊದಲಾದ ನೈಸರ್ಗಿಕ ಸಂಪತ್ತು ಮಾನವನು ತೀಕ್ಷ್ಣವಾಗಿ ನಾಗರೀಕತೆಯತ್ತ ದಾಪುಗಾಲನ್ನಿಡಲು ಕಾರಣವಾಯಿತು. ಪ್ರಾಗಿತಿಹಾಸ ಕಾಲದಿಂದ ಬೃಹತ್ ಶಿಲಾಯುಗದ ವರೆಗಿನ ಅವಶೇಷಗಳು ಹೆಚ್ಚಿನ ಪ್ರಮಾಣದಲ್ಲಿರುವುದರಿಂದ ಆ ಕಾಲದ ಸಂಪೂರ್ಣವಾದ ಚಿತ್ರಣ ದೊರೆಯುತ್ತದೆ. ಇಲ್ಲಿಯ ಪ್ರಾಚೀನ ಜನವರ್ಗದ ಅನೇಕ ಆಚರಣೆಗಳನ್ನು ಅವರು ನಿರ್ಮಿಸಿದ ಸಮಾಧಿಗಳಲ್ಲಿ ಮತ್ತು ಬಿಡಿಸಿದ ಚಿತ್ರಕಲೆಗಳಲ್ಲಿ ತೋರಿಸಿ ಕೊಟ್ಟಿದ್ದಾರೆ. ಇಂದಿಗೂ

ಪ್ರಾಗೈತಿಕ ಇತಿಹಾಸ ಕಾಲದ ಅವಶೇಷಗಳು ದೊರೆತಿರುವುದನ್ನು ನೋಡಿದರೆ ಅಂದು ಕೂಡ ಸಾಮಾಜಿಕ ಕಟ್ಟುಪಾಡುಗಳಿಗೆ ಒಳಗಾಗಿದ್ದಂತಹ ಜನ ವಾಸವಾಗಿತ್ತೆಂಬುದನ್ನು ಅರಿಯಬಹುದು. ಮುಖ್ಯವಾಗಿ ಈ ಪ್ರದೇಶದಲ್ಲಿ ಬೆಟ್ಟಗುಡ್ಡಗಳು ಇರುವುದರಿಂದ ಇಲ್ಲಿ ಶಿಲಾಯುಧಗಳು, ಕಲ್ಲಿನ ಉಪಕರಣಗಳ ಉತ್ಪಾದನೆ, ಕಂಡುಕೊಂಡಿದ್ದಲ್ಲದೆ ಸತ್ತವರಿಗಾಗಿ ವಿಶಿಷ್ಟ ಬಗೆಯ ಗೋರಿಗಳ ನಿರ್ಮಾಣ ಕಾರ್ಯ ನಡೆದಿದೆ. ಅವುಗಳ ನಿರ್ಮಾಣದಲ್ಲಿ ಬಳಸಿದ ತಂತ್ರಜ್ಞಾನ ಮತ್ತು ಶವಸಂಸ್ಕಾರ ಪದ್ಧತಿಗಳನ್ನು ಗಮನಿಸಿದರೆ, ಅವರಲ್ಲಿ ವಿಶಿಷ್ಟ ಬಗೆಯ ನಂಬಿಕೆಗಳು ಆಚರಣೆಯಲ್ಲಿದ್ದುದನ್ನು ಗಮನಿಸಬಹುದು.

ದೇವಾಲಯಕ್ಕೆ ಹೊಂದಿಕೊಂಡಂತೆ ಅನೇಕ ಮೂರ್ತಿ ಶಿಲ್ಪಗಳಿವೆ. ಪೌರಾಣಿಕ ಮತ್ತು ಜನಪದೀಯ ಶಿಲ್ಪಗಳನ್ನು ದೇವಾಲಯದ ಗೋಡೆ ಮತ್ತು ಕಂಬಗಳಲ್ಲಿ ಅಳವಡಿಸಲಾಗಿದೆ. ಸಂಪ್ರದಾಯ ನಂಬಿಕೆಗಳನ್ನು ಉಳಿಸಿಕೊಂಡು ಬಂದಿರುವ ಗಜಲಕ್ಷ್ಮಿ ಶಿಲ್ಪಗಳು, ಆತ್ಮಬಲಿ, ಮಾಸಿಗಲ್ಲುಗಳು, ವೀರಗಲ್ಲುಗಳು ಈ ಪ್ರದೇಶದಲ್ಲಿ ವಿಶೇಷವಾಗಿ ಕಂಡುಬರುತ್ತವೆ.

ತೆಕ್ಕಲಕೋಟೆ ಪ್ರದೇಶದ ಸಾಂಸ್ಕೃತಿಕ ಪರಂಪರೆಯನ್ನು ಪುನರ್ರಚಿಸುವಲ್ಲಿ ಪ್ರಾಗಿತಿಹಾಸ ಕಾಲದ ಅವಶೇಷಗಳು, ಸ್ಮಾರಕಗಳು, ಶಾಸನಗಳು, ಸಾಹಿತ್ಯ, ಜಾನಪದ ಮತ್ತು ಮೌಕಿಕ ಆಕರಗಳು ಲಭ್ಯವಿದ್ದು ಅವುಗಳನ್ನು ಬಳಸಿಕೊಳ್ಳಲಾಗಿದೆ.

ಹೀಗೆ ಪ್ರಾಚೀನ ಕಾಲದಿಂದ ಬ್ರಿಟೀಷರ ಆಡಳಿತದವರೆಗೆ ಈ ಪ್ರದೇಶ ರಾಜಕೀಯವಾಗಿ, ಆಡಳಿತಾತ್ಮಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ಕಲೆ ಮತ್ತು ವಾಸ್ತುಶಿಲ್ಪದಲ್ಲಿ ಅನೇಕ ಸ್ಥಿತ್ಯಂತರಗಳನ್ನು ಕಾಣಬಹುದಾಗಿವೆ. ರಾಜಕೀಯ ವಿಚಾರದಲ್ಲಿ ಮೌರ್ಯರರ ನಂತರ ರಾಷ್ಟ್ರಕೂಟರ ಕಾಲದವರೆಗೆ ಈ ಪ್ರದೇಶದ ಐತಿಹಾಸಿಕ ಆಧಾರಗಳು ಮೌನವಾಗಿವೆ ಆ ನಡುವಿನ ಇತಿಹಾಸವನ್ನು ಇನ್ನಷ್ಟು ಅಧ್ಯಯನಗಳಿಂದ ಸ್ಪಷ್ಟವಾಗಬೇಕಾಗಿದೆ. ಆರ್ಥಿಕ ವ್ಯವಸ್ಥೆಯಲ್ಲಿ ಸೂಕ್ಷ್ಮವಾದ ಕೊಂಡಿಗಳು ಸಿಕ್ಕಿಲ್ಲ ಇವುಗಳ ಅಧ್ಯಯನ ನಡೆಯಬೇಕಿದೆ. ದೇವಾಲಯಗಳು, ಅರಮನೆಗಳು, ಶಾಸನಗಳು, ನಾಶವಾಗಿವೆ ಕೆಲವು ದುಸ್ಥಿತಿಯಲ್ಲಿರುವ ಕಾರಣ, ಅವುಗಳ ಪರಿಚಯ ನಮಗೆ ಈಗ ಆಗುವುದು ಅಸಾಧ್ಯವಾಗಿದೆ. ಈಗಿರುವ ಕೆಲವು ಕುಲಕರ್ಣಿಗಳು, ನಾಡಗೌಡರ ವಂಶಸ್ಥರು ಮೊದಲಾದವರು ತಮ್ಮಲಿರುವ ದಾಖಲೆಗಳನ್ನು, ಹಸ್ತಪ್ರತಿಗಳನ್ನು ಅಧ್ಯಯನಕ್ಕೆ ನೀಡದ ಕಾರಣ ಮಾಹಿತಿ ಸಂಗ್ರಹಿಸುವುದು ಕಷ್ಟಸಾಧ್ಯವಾಗಿದೆ. ಈ ದಾಖಲೆಗಳ ಸಂಗ್ರಹದಿಂದ ಅನೇಕ ಮಾಹಿತಿಗಳು ದೊರೆತರೆ ತೆಕ್ಕಲಕೋಟೆ ಬಳ್ಳಾರಿ ಇತಿಹಾಸದಲ್ಲಿ ಮಹತ್ವದ ಸ್ಥಾನಪಡೆದುಕೊಳ್ಳುತ್ತದೆ.

**ಅಧ್ಯಯನದ ಫಲಿತಗಳು.**

ಯಾವುದೇ ಒಂದು ಸಂಶೋಧನೆಯು ಫಲಪ್ರದವಾಗಿರಬೇಕಾದರೆ ಆ ಸಂಶೋಧನಯ ಗುರಿ–ಉದ್ದೇಶಗಳನ್ನು ಈಡೇರಿಸಿಕೊಳ್ಳುವುದು ಸಂಶೋಧಕನ ಆದ್ಯ ಕರ್ತವ್ಯ. ಈ ಸಂಶೋಧನಾ ಪ್ರಬಂಧವು ಕೆಲವು ಮೂಲ ಗುರಿ ಉದ್ದೇಶಗಳನ್ನು ಹೊಂದಿದ್ದು ಅವುಗಳನ್ನು ಸಫಲಗೊಳಿಸಲು ಪ್ರಯತ್ನಿಸಲಾಗಿದೆ.

- ಈ ನಾಡು ಭೌಗೋಳಿಕವಾಗಿ ಬೆಟ್ಟ, ಗುಡ್ಡ, ನದಿಗಳಿಂದ ಕೂಡಿದ್ದು, ಇದರ ಎಲ್ಲೆಗಳನ್ನು ರಾಜಕೀಯ, ಕಾಲ, ಆಡಳಿತಗಳಿಂದ ಸ್ಥಿತ್ಯಂತರಕ್ಕೆ ಒಳಗಾಗಿದ್ದು, ಹೀಗೆ ಕಾಲಾನುಕಾಲಕ್ಕೆ ಬದಲಾದ ಗಡಿಗಳನ್ನು ಸ್ಪಷ್ಟವಾಗಿ ಗುರುತಿಸುವುದರ ಜೊತೆಗೆ ಸಧ್ಯದ ಭೌಗೋಳಿಕ ಎಲ್ಲೆಗಳನ್ನು ದಾಖಲಿಸಲಾಗಿದೆ.
- ಈ ನಾಡಿನ ರಾಜಕೀಯ ಇತಿಹಾಸವು ಮೌರ್ಯರಿಂದ ಪ್ರಾರಂಭವಾಗಿ ಪ್ರಸಿದ್ಧ ಮನೆತನಗಳಾದ ಕಲ್ಯಾಣಿಯ ಚಾಲುಕ್ಯರು, ನೊಳಂಬರು, ವಿಜಯನಗರ ಸಾಮ್ರಾಜ್ಯ, ಸ್ಥಳಿಯ ಪಾಳೆಗಾರರು, ಬ್ರಿಟೀಷರ ಆಳ್ವಿಕೆಯವರೆಗಿನ ಇತಿಹಾಸವನ್ನು ಕಾಲಾನುಕ್ರಮದಲ್ಲಿ ಈ ಪ್ರಬಂಧದಲ್ಲಿ ವಿವರಿಸಲಾಗಿದೆ.
- ಈ ದೇವಾಲಯದ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಶಾಸನಗಳು ಅಮೊಘ ಪಾತ್ರ ವಹಿಸಿದ್ದು ದೇವಾಲಯಕ್ಕೆ ಮತ್ತು ಊರಿಗೆ ಸಂಬಂಧಿಸಿದಂತೆ ೭ ಶಾಸನಗಳು ಇವೆ. ಇದರ ಜೊತೆಗೆ ಪ್ರಕಟಿತವಾಗದ ಮತ್ತೊಂದು ಹೊಸ ಶಾಸನವನ್ನು ಪತ್ತೆ ಮಾಡಲಾಗಿದೆ. ಇವುಗಳನ್ನು ಪ್ರಧಾನ ಆಕರಗಳಾಗಿ ಮಾಡಿಕೊಂಡು ಈ ಪ್ರಬಂಧವನ್ನು ರಚಿಸಲಾಗಿದೆ, ಅಲ್ಲದೆ ಈ ಶಾಸನಗಳ ಸಂರಕ್ಷಣೆಗಾಗಿ ಸ್ಥಳೀಯರಲ್ಲಿ ಜಾಗೃತಿ ಮೂಡಿಸಲಾಗಿದೆ.
- ಮೈಲಾರ ಪರಂಪರೆಯ ಪ್ರಾಚೀನತೆಯನ್ನು ಶಾಸನ ಮತ್ತು ಸಾಹಿತ್ಯದ ಹಿನ್ನಲೆಯಲ್ಲಿ ಅನೇಕ ವಿದ್ವಾಂಸರು ಅವಲೋಕಿಸಿ ಮೈಲಾರ ಕ್ಷೇತ್ರಗಳಲ್ಲಿ ಅತ್ಯಂತ ಪ್ರಾಚೀನವಾದ ಕ್ಷೇತ್ರ ಹಿರೇ ಮೈಲಾರವೆಂದು ಸಾಭಿತು ಪಡಿಸಿದ್ದಾರೆ. ಆದರೆ ಮೈಲಾರನಿಗೆ ಸಂಬಂಧಿಸಿದಂತೆ ಅತ್ಯಂತ ಪ್ರಾಚೀನ ಶಾಸನ ೧೦೧೭ ರ ಶಾಸನವಾಗಿದ್ದು ಇದು ತೆಕ್ಕಲಕೋಟೆ ಮಲ್ಲಯ್ಯನ ದೇವಸ್ಥಾದಲ್ಲಿ ಇದೆ. ಅಲ್ಲದೆ ಈ ದೇವಾಲಯ ೧೧ನೇ ಶತಮಾನದ ದೇವಾಲುವಾಗಿದ್ದು, ಕಲ್ಯಾಣ ಚಾಲುಕ್ಯರ ಆರಂಬಿಕ ಲಕ್ಷಣಗಳನ್ನು ಹೋಲುತ್ತದೆ. ಆದ್ದರಿಂದ ತೆಕ್ಕಲಕೋಟೆಯ ಮೈಲಾರ ದೇವರು ಕರ್ನಾಟಕ, ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶ ಇತರೆ ಎಲ್ಲಾ ಕ್ಷೇತ್ರಗಳಿಗಿಂತಲೂ ಪ್ರಾಚೀನವಾಗಿದೆ ಎಂದು ತರ್ಕಿಸಲಾಗಿದೆ.
- ಮಲ್ಲಯ್ಯನ ದೇವಸ್ಥಾನವು ಅತ್ಯಂತ ಪ್ರಾಚೀನವಾದುದಾಗಿದೆ. ಈ ದೇವಾಲಯವನ್ನು ೩ ಹಂತದಲ್ಲಿ ನಿರ್ಮಿತವಾಗಿದ್ದು ವಾಸ್ತುಶೈಲಿಯ ದೃಷ್ಟಿಯಿಂದ ಅತ್ಯಂತ ಶ್ರೀಮಂತವಾಗಿದೆ. ಆದರೆ ಇತ್ತೀಚಿನ ದಿನಗಳಲ್ಲಿ ದೇವಾಲಯದ ಕೆಲವು ಭಾಗಗಳು ನಾಶವಾಗಿವೆ ಇನ್ನು ಕೆಲವು ಭಾಗಗಳು ಶಿಥಿಲಾವಸ್ತೆಯಲ್ಲಿವೆ. ನಾಶವಾಗಿರುವ ಭಾಗಗಳನ್ನು ಆಧುನಿಕ ಶೈಲಿಯಲ್ಲಿ ಪುನರ್ ನಿರ್ಮಿಸಿದ್ದಾರೆ. ಮೊದಲಿನ ಅವಶೇಷಗಳನ್ನು ಬಳಸಿ ಆಧುನಿಕ ಕಟ್ಟೆಗಳನ್ನು ದೇವಸ್ಥಾನದ ಒಳಭಾಗದಲ್ಲಿ . ನಿರ್ಮಿಸಿದ್ದಾರೆ. ಜೊತೆಗೆ ದೇವಸ್ಥಾನದ ಆವರಣದಲ್ಲಿ ಅನೇಕ ಮೂರ್ತಿಶಿಲ್ಪಗಳು, ಸ್ಮಾರಕಶಿಲ್ಪಗಳಾದ ಗಜಲಕ್ಷ್ಮಿ, ವಿರಗಲ್ಲುಗಳು, ಮಾಸ್ತಿಗಲ್ಲುಗಳು, ಆತ್ಮಬಲಿ ಸ್ಮಾರಕಗಳು ಹೆಚ್ಚಿನ ಪ್ರಮಾಣದಲ್ಲಿ ಕಾಣ ಸಿಗುತ್ತವೆ. ಆದರೆ ಸ್ಥಳೀಯ ಜನಪದರಲ್ಲಿ ಇವುಗಳ ಬಗೆಗೆ ಯಾವುದೇ ತಿಳುವಳಿಕೆ, ಜ್ಞಾನವಿಲ್ಲವಾಗಿದೆ. ಅದ್ದರಿಂದ ಈ ಎಲ್ಲಾ ಸ್ಮಾರಕಗಳ ರಕ್ಷಣೆ ಹಾಗೂ ಪುನರುಜ್ಜೀವನದ ಅವಶ್ಯಕತೆ ಇದ್ದು, ಇದರ ಬಗ್ಗೆ ಸ್ಥಳೀಯರಲ್ಲಿ ಹಾಗೂ ಜನಪ್ರತಿನಿಧಿ ನಾಯಕರಲ್ಲಿ ಜಾಗೃತಿ ಮೂಡಿಸುವ ಕಾರ್ಯ ನಡೆಯಬೇಕಾಗಿದೆ.

- ಜನಪದರ ಮನೆ ದೇವರಾದ, ಪವಾಡ ಪುರುಷನಾದ, ಮಲ್ಲಯ್ಯನ ನಂಬಿಕೆ ಮತ್ತು ಆಚರಣೆಗಳು ಪ್ರಾಚೀನಕಾಲದಿಂದ ತಲತಲಾಂತರದಿಂದ ಜನರಲ್ಲಿ ಉಳಿದುಕೊಂಡು ಬಂದಿರುವುದು ಅತ್ಯಂತ ಮಹತ್ವವಾದ ವಿಚಾರವಾಗಿದೆ, ಈತನ ನಂಬಿಕೆ ಆಚರಣೆಗಳಿಂದ ಮಲ್ಲಯ್ಯನ ಮಹಿಮೆ, ಮಹತ್ವ, ಹಿನ್ನಲೆ, ಸತ್ಯತೆ, ವೈಶಿಷ್ಟ್ಯತೆ, ಪವಾಡಗಳನ್ನು ಅರಿಯಲು ಸಾಧ್ಯವಾಗುತ್ತದೆ.

ಇಂತಹ ಅದೆಷ್ಟೋ ದೇವಾಲಯಗಳು ಬಳ್ಳಾರಿ ಜಿಲ್ಲೆಯಲ್ಲಿ ಇವೆ. ಇಂದು ಅವುಗಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸಲಾಗಿದೆ. ಅವುಗಳ ಬಗ್ಗೆ ಅಧ್ಯಯನಗಳು ಸಡೆದಾಗ ಮಾತ್ರ. ಈ ನಾಡಿನ ಇತಿಹಾಸದಲ್ಲಿ ಅವುಗಳ ಪಾತ್ರ ಮತ್ತು ಮಹತ್ವವೇನು ಎಂಬುದು ತಿಳಿದುಬರುತ್ತದೆ. ಆದ್ದರಿಂದ ಇಂತಹ ದೇವಾಲಯಗಳನ್ನು ಗುರುತಿಸಿ, ಮಾಹಿತಿ ಸಂಗ್ರಹಿಸಿ ದೇವಾಲಯದ ವೈಶಿಷ್ಟ್ಯತೆ, ಮಹತ್ವ, ಲಕ್ಷಣ, ಮೊದಲಾದುದನ್ನು ಅವಲೋಕಿಸಿ ಈ ದೇವಾಲಯದ ಕುರಿತು ಜನಸಾಮಾನ್ಯರಲ್ಲಿ ಜಾಗೃತಿ ಮೂಡಿಸುವುದರ ಜೊತೆಗೆ ಸಂರಕ್ಷಣೆಗೊಳಪಡಿಸುವುದು ಒಬ್ಬ ಸಂಶೋಧಕನ ಆಧ್ಯ ಕರ್ತವ್ಯವಾಗಿದೆ.

ಅನುಬಂಧಗಳು

ವಕ್ತೃವಿವರ

| ಕ್ರಸಂ | ಹೆಸರು | ವಯಸ್ಸು | ವೃತ್ತಿ | ಊರು |
|---|---|---|---|---|
| ೧ | ತಿಕ್ಕಯ್ಯ ಸ್ವಾಮಿ | ೫೮ | ತ್ರಿಶೂಲವನ್ನು ಹೊತ್ತುಕೊಳ್ಳುವ ವ್ಯಕ್ತಿ | ಹೊಳಗುಂದ |
| ೨ | ದುರುಗಪ್ಪ | ೪೫ | ಇವರ ಮಗ | ಹೊಳಗುಂದ |
| ೩ | ಕನ್ನಯ್ಯ | ೪೬ | ಭಕ್ತರು | ಹೊಳಗುಂದ |
| ೪ | ದೇವಣ್ಣ | ೪೩ | ಭಕ್ತರು | ಹೊಳಗುಂದ |
| ೫ | ಸವರೆಪ್ಪ | ೪೬ | ಭಕ್ತರು | ಹೊಳಗುಂದ |
| ೬ | ಬಡೇಮಲ್ಲಿ | ೪೭ | ಭಕ್ತರು | ಹೊಳಗುಂದ |
| ೭ | ಈರಣ್ಣ | ೩೫ | ಪೂಜಾರಿ | ತೆಕ್ಕಲಕೋಟೆ |
| ೮ | ಸಿದ್ಧಪ್ಪ | ೪೨ | ಪೂಜಾರಿ | ತೆಕ್ಕಲಕೋಟೆ |
| ೯ | ಹೆಲಿಗಡ ಈರೇಶ | ೪೦ | ಪೂಜಾರಿ | ತೆಕ್ಕಲಕೋಟೆ |
| ೧೦ | ಶೇಕರಮ್ಮ | ೩೭ | ಪೂಜಾರಿಯ ಹೆಂಡತಿ | ತೆಕ್ಕಲಕೋಟೆ |
| ೧೧ | ವೀರೇಂದ್ರ | ೨೭ | ಪೂಜಾರಿಯ ಮಗ | ತೆಕ್ಕಲಕೋಟೆ |
| ೧೨ | ನಾಗರಾಜ.ಬಿ | ೨೫ | ಊರಿನ ಯುವಕ | ತೆಕ್ಕಲಕೋಟೆ |
| ೧೩ | ಮನೋಹರ.ಟಿ | ೨೮ | ಊರಿನ ಯುವಕ | ತೆಕ್ಕಲಕೋಟೆ |

## ತೆಕ್ಕಲಕೋಟೆಯಲ್ಲಿರುವ ಶಾಸನಗಳ ಪಟ್ಟಿ

| ಕ್ರಸ ೦ | ಶಾಸನವಿರುವ ಸ್ಥಳ | ಶಾಸನದ ಕಾಲ | ಶಾಸನ ಹೊರಡಿಸಿದ ಅರಸ | ಹೊರಡಿಸಿದ ಅರಸ /ಅಧಿಕಾರಿ/ ಸಾಮಂತರು |
|---|---|---|---|---|
| ೧ | ಮಲ್ಲಯ್ಯನ ಗುಡ್ಡ ತೆಕ್ಕಲಕೋಟೆ | ಕ್ರಿ.ಶ. ೧೦೧೭ | ೨ನೇ ಜಯಸಿಂಹ | ಜಗದೇಕಮಲ್ಲ ಸಾಮಂತನಾದ ಜಗದೇಕ ನೊಳಂಬನ |
| ೨ | ತೆಕ್ಕಲಕೋಟೆ | ಕ್ರಿ.ಶ. ೧೦೨೦ | ೨ನೇ ಜಯಸಿಂಹ | ಘಟೆಯಂಕಕಾರ ಬ್ರಹ್ಮಾಧಿರಾಯರು |
| ೩ | ತೆಕ್ಕಲಕೋಟೆ | ಕ್ರಿ.ಶ. ೧೨ನೇ ಶತಮಾನ | ೨ನೇ ಬಿಜ್ಜಳ | ಸಿಂಧರ ರಾಚಮಲ್ಲನಾಧಿಕಾರಿ ಕೇತಯ ಸಾಹಣಿ |
| ೪ | ತೆಕ್ಕಲಕೋಟೆ | ಕ್ರಿ.ಶ.೧೫೧೧ | ಶ್ರೀ ಕೃಷ್ಣದೇವರಾಯ | ಗ್ರಾಮದ ನಾಯಕನು ಶ್ರೀ ಕೃಷ್ಣ ರಾಯರಿಗೆ ಪುಣ್ಯವಾಗಬೇಕೆಂದು ದಾನ ಬಿಟ್ಟ ಉಲ್ಲೇಖವಿದೆ. |
| ೫ | ತೆಕ್ಕಲಕೋಟೆ | ಕ್ರಿ.ಶ.೧೫೩೯ | ಅಚ್ಚುತರಾಯ | ಅಚ್ಯುತರಾಯನ ಅಧಿಕಾರಿ ಪಯಜರೈಯ್ಯ |
| ೬ | ಮಲ್ಲಯ್ಯನ ಗುಡ್ಡ | ಕ್ರಿ.ಶ.೧೭೦೧ | ಪಾಳೆಯಗಾರರು | ಭೀಮಸಿಂಗ ಹೆಡೆ |
| ೭ | ತೆಕ್ಕಲಕೋಟೆ | ಕ್ರಿ.ಶ.೧೭೩೯ | ಆದೋನಿ ಹವಾಲ್ದಾರ | ಸಿದ್ಧಿ ಮಸೂದ್‌ಖಾನ್ |

# ಆಧಾರ ಗ್ರಂಥಗಳು


ಅಪರ್ಣ ಕೂ.ಸ., ೧೯೯೯, **ದೇವಾಲಯದ ವಾಸ್ತುಶಿಲ್ಪ ಪರಿಚಯ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕಲಬುರ್ಗಿ ಎಂ. ಎಂ., ೨೦೧೦, **ಮಾರ್ಗ ಸಂಪುಟ – ೨ ಮತ್ತು ೪**, ಸಪ್ನಬುಕ್ ಹೌಸ್, ಬೆಂಗಳೂರು.

ಕರಾಕೃ, ೧೯೬೩, **ಮೈಲಾರಲಿಂಗ – ಈರಬಟಪ್ಪ**. ಜಾನಪದ ಸಾಹಿತ್ಯ ಅಕಾಡಮಿ, ಮೈಸೂರು.

ಕೃಷ್ಣರಾವ್ ಎಂ.ವ್ಹಿ. ಮತ್ತು ಕೇಶವಭಟ್ಟ ಎಂ., ೧೯೭೦, **ಕರ್ನಾಟಕ ಇತಿಹಾಸ ದರ್ಶನ**, ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ (ನಿ), ಬೆಂಗಳೂರು.

ಕೊಟ್ರೇಶ್ ಎಂ., ೨೦೧೧, **ಬಳ್ಳಾರಿ ಜಿಲ್ಲೆಯ ಕೋಟೆಗಳು**, ಪ್ರಸಾರಂಗ, ಕ.ವಿ.ವಿ. ಹಂಪಿ.

ಗೋಪಲ ಬಾ. ರಾ., ೧೯೮೯, **ಕರ್ನಾಟಕದಲ್ಲಿ ನವಶಿಲಾಯುಗ**, ಪ್ರಸಾರಂಗ, ಕರ್ನಾಟಕ ವಿಶ್ವವಿದ್ಯಾಲಯ, ದಾರವಾಡ.

ಚಿದಾನಂದಮೂರ್ತಿ ಎಂ., ೧೯೬೬, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**. ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಚಕ್ಕರೆ ಶಿವಶಂಕರ (ಸಂ), ೧೯೯೯, **ನೇಗಿನಹಾಳ್ ಪ್ರಬಂಧಗಳು**, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಢೇರೆ ಚಿಂ., ೨೦೦೩, **ದಕ್ಷಿಣ ದೇಶೀದೇವರು ಶ್ರೀ ಖಂಡೋಬಾ**, ಸಿ.ವಿ.ಜಿ. ಪ್ರಕಾಶನ, ಬೆಂಗಳೂರು.

ತಿಪ್ಪೇರುದ್ರಸ್ವಾಮಿ ಎಚ್., ೧೯೯೪, **ಕರ್ನಾಟಕ ಸಾಂಸ್ಕೃತಿಕ ಸಮೀಕ್ಷೆ**, ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು.

ನಾಗಯ್ಯ. ಜೆ.ಎಂ., ೨೦೦೭, **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ**, ಲೋಹಿಯ ಪ್ರಕಾಶನ ಬಳ್ಳಾರಿ.

ನೇಗಿನಹಾಳ್ ಎಂ.ಬಿ., ೧೯೯೨, **ಮೈಲಾರಲಿಂಗ – ಖಂಡೋಬಾ**, ಪ್ರಸಾರಂಗ, ಕರ್ನಾಟಕ ವಿಶ್ವವಿದ್ಯಾಲಯ, ದಾರವಾಡ.

ನೇಗಿನಹಾಳ್ ಎಂ.ಬಿ., ೧೯೮೩, **ಮೈಲಾರಲಿಂಗನ ಪದಗಳು – ೧**, ಪ್ರಸಾರಂಗ, ಕರ್ನಾಟಕ ವಿಶ್ವವಿದ್ಯಾಲಯ, ದಾರವಾಡ.

ನೇಗಿನಹಾಳ್ ಎಂ.ಬಿ., ೧೯೯೯, **ನೇಗಿನಹಾಳ ಪ್ರಬಂಧಗಳು,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪರಮಶಿವಯ್ಯ ಜೀ. ಶಂ., ೧೯೮೧, **ಮೈಲಾರಲಿಂಗ ಗೊರವರು,** ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

ಪರಮಶಿವಯ್ಯ ಜೀ. ಶಂ., ೨೦೧೨, **ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು,** ಸಾಗರ ಪ್ರಕಾಶನ, ಬೆಂಗಳೂರು.

ಪಾಡಿಗಾರ್ ಎಸ್.ವಿ., ೧೯೮೭, **ಪುರಾತತ್ವ ಪರಿಚಯ,** ರಾಮಾಶ್ರಮ ಪಬ್ಲಿಕೇಷನ್ಸ್, ಧಾರವಾಡ

ಪ್ರಧಾನಪ್ಪ ಬಾ ಹನುಮಣ್ಣನವರ್, ೧೯೯೬, **ಮೈಲಾರಲಿಂಗೇಶ್ವರನ ಒಡಪುಗಳು,** ಮೈಲಾರೇಶ್ವರ ಪ್ರಕಾಶನ, **ಕೊಂಕಣ ಕುರುಹಟ್ಟಿ.**

ಪ್ರಭಾಕರ್ ಎಂ.ಎನ್., ೨೦೧೧, **ದೇವಾಲಯ ವಾಸ್ತು,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪೆಂಡಕೂರು ಗುರುಮೂರ್ತಿ, ೨೦೦೬, **ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು,** ಕನ್ನಡ ಸಿಹಿತ್ಯ ಪರಿಷತ್ತು ಬೆಂಗಳೂರು.

ಬಸವರಾಜಪ್ಪ ಹೆಚ್. ಪಿ., **ಬಳ್ಳಾರಿ ಜಿಲ್ಲೆಯ ಚಿತ್ರಕಲೆ (ಮಂಟಪ ಮಾಲೆ–೧೪೨),** ಪ್ರಸಾರಂಗ, ಕ.ವಿ.ವಿ. ಹಂಪಿ.

ಮಂಜುನಾಥ ಸಿ.ಯು., ೨೦೧೨, **ಶಾಸನಗಳು ಮತ್ತು ಸಂಸ್ಕೃತಿ ,** ಪ್ರಕಾಶನ, ಕುಪ್ಪಂ.

ಮಹದೇವ ಸಿ. (ಸಂ), ೨೦೧೨, **ಮೈಲಾರ,** ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮಂಜುನಾಥ ಬೇವಿನಕಟ್ಟಿ, ೧೯೯೯, **ಮೈಲಾರಲಿಂಗನ ಕಾವ್ಯ,** ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರವೀಂದ್ರನಾಥ ಕೆ., ೨೦೦೭, **ಬಳ್ಳಾರಿ ಜಿಲ್ಲಾ ದರ್ಶನ,** ಪ್ರಸಾರಂಗ, ಗು.ವಿ. ಗುಲ್ಬರ್ಗ.

ರಾಘವೇಂದ್ರ ಎಂ., ೧೯೮೮, **ಶಿರಗುಪ್ಪ ತಾಲ್ಲೂಕಿನ ದರ್ಶನ,** ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು.

ರಾಜಶೇಖರ. ಕ. ಎಲ್., ೨೦೦೮, **ಚರಿತ್ರೆ ಅಧ್ಯಯನ ಸಂಪುಟ–೪, ಸಂಚಿಕೆ–೧,** ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಾಮಕೃಷ್ಣಯ್ಯ, **ಶಿರಗುಪ್ಪ ತಾಲ್ಲೂಕಿನ ಐತಿಹಾಸಿಕ ಮತ್ತು ಸಾಂಸ್ಕೃತಿಕ ಅಧ್ಯಯನ,** ಸ್ನೇಹ ಪ್ರಿಂಟರ್ಸ್, ಬೆಂಗಳೂರು.

ಲಕ್ಷ್ಮೀ ನಾರಾಯಣರಾಯರು ಮತ್ತು ಪಂಚಮುಖಿ ಆರ್. ಎಸ್., ೧೯೪೬, **ಕರ್ನಾಟಕದ ಅರಸುಮನೆತನಗಳು.** ಧಾರವಾಡ.

ಲಕ್ಷ್ಮಣ ತೆಲಗಾವಿ, ೨೦೦೪, **ಮೌರ್ಯ ಮತ್ತು ಶಾತವಾಹನಯುಗ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಸು ಎಂ. ವಿ., **ದಕ್ಷಿಣ ಭಾರತದ ಅರಸು ಮನೆತನಗಳು**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಾಸುದೇವ ಬಡಿಗೇರ, ೨೦೧೨, **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ**, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ಭಾಗ – ೧

ವೆಂಕಟೇಶ ಎಂ.ಏನ್., ೧೯೯೮, **ಮೈಲಾರದ ಜಾತ್ರೆಗಳು**, ಅಭಿ ಆದರ್ಶ ಪ್ರಕಾಶನ, ಭದ್ರಾವತಿ.

ಶಿವತಾರಕ್ ಕೆ.ಬಿ., ೨೦೦೧, **ಕರ್ನಾಟಕ ಪುರಾತತ್ವ ನೆಲೆಗಳು** , ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶಿವರಾಮ ಕಾರಂತ, ೧೯೬೯, **ಚಾಲುಕ್ಯ ವಾಸ್ತು ಮತ್ತು ಶಿಲ್ಪ**, ಧಾರವಾಡ.

ಶೇಷಶಾಸ್ತ್ರಿ.ಆರ್., ೨೦೦೪, **ಕರ್ನಾಟಕದ ವೀರಗಲ್ಲುಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಶ್ರೀನಿವಾಸ.ಎಲ್., ೨೦೧೦, **ಹಂಪಿ ಪರಿಸರದ ಆದಿಮಾನವನ ನೆಲೆಗಳು**, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸುರೇಶ್ ಕೆ. ಎಂ., ೧೯೯೭, **ಕರ್ನಾಟಕ ದೇವಾಲಯಗಳ ಕೋಶ–ಬಳ್ಳಾರಿ ಜಿಲ್ಲೆ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸೋಮಶೇಖರ ಎಸ್.ವೈ., ೨೦೦೯, **ವಿಜಯನಗರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧನೀತಿ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಪಿ.ಎಚ್.ಡಿ. ಮಹಾಪ್ರಬಂಧಗಳು**

ನಾಗರಾಜ ಹೊಸೂರಕರ್, ೨೦೦೬, **ಮೈಲಾರಲಿಂಗ ಆಚರಣೆ – ಒಂದು ಸಾಂಸ್ಕೃತಿಕ ಅಧ್ಯಯನ**, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವೆಂಕಟೇಶ ಎಂ.ಎನ್., ೧೯೯೭, **ಮೈಲಾರಲಿಂಗ ಜಾತ್ರೆಗಳು**, ಪ್ರದರ್ಶನಾತ್ಮಕ ಅಧ್ಯಯನ, ಕುವೆಂಪು ವಿಶ್ವವಿದ್ಯಾಲು, ಶಿವಮೊಗ.

**ಸಂಪುಟಗಳು.**

ದೇವರ ಕೊಂಡಾರೆಡ್ಡಿ (ಪ್ರ.ಸಂ), ೧೯೯೮, ಕನ್ನಡ ವಿಶ್ವವಿದ್ಯಾಲಯ **ಶಾಸನ ಸಂಪುಟ – ೧ ಬಳ್ಳಾರಿ ಜಿಲ್ಲೆ**, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಷೇಕ್ ಅಲಿ ಬಿ. (ಪ್ರ.ಸಂ), ೧೯೯೭. **ಕರ್ನಾಟಕ ಚರಿತ್ರೆ ಸಂಪುಟ – ೧ ರಿಂದ ೫**, ಪ್ರಸಾರಂಗ, ಕನ್ನಡವಿಶ್ವವಿದ್ಯಾಲಯ, ಹಂಪಿ.

**ವರದಿಗಳು**

*Annual Report On South Indian Epigraphy.*

*South Indian Inscriptions.*

*Chnnabasappa, C.S.- Inscription of Bellary District-directorate of Archaeology and Museums, Mysore.*

**ವಿಶ್ವಕೋಶಗಳು**

**ಕನ್ನಡ ವಿಷಯ ವಿಶ್ವಕೋಶ,** ೨೦೦೫, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಅಂಬಳಿಕೆ ಹಿರಿಯಣ್ಣ (ಪ್ರಸಂ), **ಕನ್ನಡ ವಿಷಯ ವಿಶ್ವಕೋಶ (ಇತಿಹಾಸ ಮತ್ತು ಪುರಾತತ್ವ),** ೨೦೦೯, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

**ಚರಿತ್ರೆ ವಿಶ್ವಕೋಶ,** ೨೦೦೮, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಗೆಜೆಟಿಯರ**

ಬಳ್ಳಾರಿ ಜಿಲ್ಲಾ ಗೆಜೆಟೀಯರ್, ಬಳ್ಳಾರಿ ಜಿಲ್ಲೆ, ಪುಟ – ೨೩೫–೨೩೬

ಡಾ. ಸೂರ್ಯನಾಥ ಕಾಮತ್, ಕರ್ನಾಟಕ ಗ್ಯಾಜಿಟೀಯರ್

**ಲೇಖನಗಳು**

ವಾಸುದೇವ ಬಡಿಗೇರ, **ಹಂಪಿ ಪರಿಸರದಲ್ಲಿ ಮೈಲಾರನ ಪರಂಪರೆ,** ಸಂ ೯, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

ವಾಸುದೇವ ಬಡಿಗೇರ, **ತುಂಗಭದ್ರಾ ನದಿ ಪರಿಸರದ ಮೈಲಾರ ಪರಂಪರೆ,** ಸಂ ೬, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

## ಛಾಯಾಚಿತ್ರಗಳು

## ಕರ್ನಾಟಕದ ನಕಾಶೆ



## ಮಲ್ಲಯ್ಯ ದೇವಸ್ಥಾನದ ತಳವಿನ್ಯಾಸ



ತೆಕ್ಕಲಕೋಟೆಯಲ್ಲಿ ಉತ್ಖನನ ನಡೆದ ಸ್ಥಳ



ನವಶಿಲಾಯುಗದ ಆಯುಧಗಳು



## ನವಶಿಲಾಯುಗದ ಚಿತ್ರಣಗಳು







ಮಲ್ಲಯ್ಯ ದೇವಸ್ಥಾನದ ಗರ್ಭಗೃಹ



ಗರ್ಭಗೃಹದ ಮೇಲಿನ ಶಿಖರ



ಶಿವ ಮತ್ತು ಮಲ್ಲಯ ದೇವಸ್ಥಾನದ ಮಹಾಮಂಟಪ



ಶಿಭಾರ ಮಂಟಪ



ಮಲ್ಲಯ್ಯ ದೇವಸ್ಥಾನದ ಹೊರನೋಟ



ದೇವಸ್ಥಾನದ ಪೂರ್ವ ದ್ವಾರಬಾಗಿಲ



ಪೂರ್ವ ದ್ವಾರದ ಗೊಪುರ



ದಕ್ಷಿಣ ದ್ವಾರಬಾಗಿಲು ( ಗಾಳಿ ಮಂಟಪ )



ಆದಿಲಿಂಗ ದೇವಸ್ಥಾನ



ಹೆಗ್ಗಪ್ಪನ ದೇವಸ್ಥಾನ



ಮಲ್ಲಯ್ಯನ ಮೂರ್ತಿ ಮತ್ತು ಬೃಂಗಿಯ ಶಿಲ್ಪ



ಶಿವ ಪಾರ್ವತಿ ಮತು ಷಣ್ಮುಕನ ಶಿಲ್ಪ



ಮಲ್ಲಯ್ಯನ ಮೂರ್ತಿ



ಬಾಳೆ ಹಣ್ಣಿನ ಮಲ್ಲಯ್ಯ



ಗಂಗಿಮಾಳಮ್ಮ ಮತ್ತು ಲಕ್ಷ್ಮಿ (ತುಪ್ಪದ ಮಾಳಮ್ಮ)





ಉತ್ಸವ ಮೂರ್ತಿಗಳು



ಮಲ್ಲಯ್ಯನ ಕುದುರೆ ಸವಾರಿ



ತ್ರಿಶೂಲ ಧಾರಿ ಕೊಂತಮ್ಮಯ್ಯ



ಶಸ್ತ್ರ ಧರಿಸಿದ ಭಕ್ತರು





ರಥದ ಮನೆ

ಜಾತ್ರೆಯ ಸಂದರ್ಭದಲ್ಲಿ ಅಲಂಕರಿಸಿದ ರಥ





ಬೃಹತ್ ನಂದಿ ಶಿಲ್ಪ



ನಂದಿ ಮೇಲೆ ಕುಳಿತ ಶಿವನ ಶಿಲ್ಪ



ಭೈರವನ ಮೂರ್ತಿಶಿಲ್ಪ



